# ಪಾತಿವ್ರತ್ಯದ ಪ್ರಾತ್ಯಕ್ಷಿಕೆ

[ದ್ರೌಪದಿ ಪ್ರಸ್ತುತಪಡಿಸಿದ ಪಾತಿವ್ರತ್ಯಧರ್ಮಗಳ ಸಂಗ್ರಹ]



ಪತ್ಯಾಶ್ರಯೋ ಹಿ ಮೇ ಧರ್ಮೋ ಮತಃ ಸ್ತ್ರೀಣಾಂ ಸನಾತನಃ

ಪ್ರಕಾಶಕರು:

ಪರವಿದ್ಯಾ ಪ್ರಕಾಶನ, ಶಮ್ಯಾಪ್ರಾಸ, ಮೂಡುಸಗ್ರಿ

# ನಾರಾಯಣಾಯೇತಿ ಸಮರ್ಪಯಾಮಿ







ತಮ್ಮ 76 ವರ್ಷಗಳ [17-7-1927ರಿಂದ 26-6-2003] ಜೀವಿತಾವಧಿಯಲ್ಲಿ ಸುಮಾರು 65 ವರ್ಷಗಳ ಕಾಲ ಪಾತಿವ್ರತ್ಯಾನುಷ್ಠಾನವನ್ನು ಯಶಸ್ವಿಯಾಗಿ ಪೂರೈಸಿದ, ಪಾತಿವ್ರತ್ಯದ ಅಂಗವಾಗಿ ತಮ್ಮ ಪತಿಯಲ್ಲಿ ದೇವರ ಅನುಸಂಧಾನವನ್ನು ತಂದುಕೊಂಡು ಅವರ ಶುಶ್ರೂಷೆಯನ್ನು 'ಪತಿಯ ಸೇವೆಯೇ ದೇವರ ಸೇವೆ' ಎಂಬ ಭಾವನೆಯಿಂದ ಸ್ವಲ್ಪವೂ ಅಸಮಾಧಾನವಿಲ್ಲದೆ ಸಂತೋಷದಿಂದ ತಮ್ಮ ಕೊನೆಯುಸಿರೆಳೆಯುವವರೆಗೂ ನಡೆಸಿ, ಅದರಿಂದಾಗಿ ಪ್ರಸನ್ನರಾದ ಹರಿಗುರುಗಳ ಪೂರ್ಣಾನುಗ್ರಹಕ್ಕೆ ಪಾತ್ರರಾದ **ಶ್ರೀಮತಿ ವನಜಾಕ್ಷಿ ವೇಂಕಟರಮಣಾಚಾರ್ಯ ಅತ್ತೂರ್** ಇವರಿಗೆ ಆನಂದಾತಿಶಯ ದೊರಕುವಂತಾಗಲೆಂದು ಪ್ರಾರ್ಥಿಸುತ್ತ, ಇವರ ಪತಿ ಶ್ರೀ ಅತ್ತೂರು ವೇಂಕಟರಮಣಾಚಾರ್ಯರ ಮೂಲಕ ವಾದಿರಾಜಾಂತರ್ಗತ ಹಯಗ್ರೀವಾಭಿನ್ನನಾದ ಮಧ್ವಾಂತರ್ಗತ ಪೊಡವಿಗೊಡೆಯನ ಪಾದಾರವಿಂದಕ್ಕೆ ಈ ಕೃತಿಕುಸುಮ ಸಮರ್ಪಿಸಲ್ಪಟ್ಟಿದೆ.

# ಓದುವ ಮುನ್ನ.....

## ಪಾತಿವ್ರತ್ಯ ಎಂದೆಂದೂ ಪ್ರಸ್ತುತ

ಯಾವುದೇ ಧರ್ಮ ಪ್ರಸ್ತುತವೆನಿಸಬೇಕಾದರೆ ಪ್ರಯೋಗಾರ್ಹ ಎನಿಸಬೇಕು. ಆದರಂತೆ ಶಾಸ್ತ್ರದಲ್ಲಿ ಸ್ತ್ರೀಯರಿಗೆ ಸಂಬಂಧಿಸಿದಂತೆ ಸಾಕಷ್ಟು ಪ್ರಾಶಸ್ತ್ಯ ಪಡೆದಿರುವ 'ಪಾತಿವ್ರತ್ಯ' ಪ್ರಯೋಗಾರ್ಹವೆನಿಸಿದರಷ್ಟೇ ಎಲ್ಲ ಕಾಲಕ್ಕೂ ಪ್ರಸ್ತುತವೆನಿಸಬಹುದು. ಪಾತಿವ್ರತ್ಯವನ್ನು ಜೀವನದಲ್ಲಿ ಅಳವಡಿಸಿಕೊಂಡು ಯಶಸ್ವಿಗಳಾದ ಪತಿವ್ರತೆಯರ ಧರ್ಮಾನುಷ್ಠಾನದ ರಹಸ್ಯವನ್ನು ಪರಿಶೀಲಿಸಿದಲ್ಲಿ ಪಾತಿವ್ರತ್ಯದ ಪ್ರಯೋಗಾರ್ಹತೆ ಸ್ಪಷ್ಟವಾಗಬಲ್ಲದು. ಅಂತಹ ಪತಿವ್ರತೆಗಳಲ್ಲೊಬ್ಬಳು ದ್ರೌಪದಿ. ಐದು ಪತಿಯರನ್ನು ಪಡೆದುಕೊಂಡೂ 'ಪತಿವ್ರತಾಶಿರೋಮಣಿ' ಎನಿಸಿಕೊಂಡ ಆಕೆಯ ಪಾತಿವ್ರತ್ಯ ತುಂಬ ಸೂಕ್ಷ್ಮ; ಅಷ್ಟೇ ಪವಿತ್ರ. ದ್ರೌಪದಿ ಅಳವಡಿಸಿಕೊಂಡಿದ್ದ ಪಾತಿವ್ರತ್ಯದ ವಿಧಿ ನಿಷೇಧಗಳನ್ನೆಲ್ಲ ಆವಳ ಮುಖದಿಂದಲೇ ಮಹಾಭಾರತ ಹೇಳಿಸಿದೆ. ಪಾತಿವ್ರತ್ಯಕ್ಕೆ ಸಂಬಂಧಿಸಿದಂತೆ ತನ್ನ ನಡತೆಗಳನ್ನೆಲ್ಲ ಸತ್ಯಭಾಮೆಯ ಎದುರು ಪ್ರಸ್ತುತಪಡಿಸಿರುವ ದ್ರೌಪದಿಯಿಂದ ಪಾತಿವ್ರತ್ಯದ ವಿಷಯದಲ್ಲಿ 'ಪ್ರಾತ್ಯಕ್ಷಿಕೆ'ಯನ್ನೇ ಸಾದರಪಡಿಸಿದಂತಾಗಿದೆ. ಪಾತಿವ್ರತ್ಯದ ವಿಧಿನಿಷೇಧಗಳೆಲ್ಲ ಪ್ರಯೋಗಾರ್ಹಗಳೇ ಎಂದು ಸಿದ್ಧಪಡಿಸಿದಂತಾಗಿದೆ. ಭಾರತೀದೇವಿ ವಿದ್ಯೆಯ ಅಮುಖ್ಯಾಭಿಮಾನಿಯಾದರೆ ಲಕ್ಷ್ಮೀದೇವಿ ವಿದ್ಯೆಯ ಮುಖ್ಯಾಭಿಮಾನಿನಿ. ಅಂತಹ ಭಾರತಿಯ ಅವತಾರ ದ್ರೌಪದಿ ಹಾಗೂ ಲಕ್ಷ್ಮಿಯ ಅವತಾರ ಸತ್ಯಭಾಮೆ ಇವರಿಬ್ಬರ ಸಂವಾದದಲ್ಲಿ ಮೂಡಿಬಂದ ಪಾತಿವ್ರತ್ಯದ ಈ ವಿಚಾರಗಳು ಸಮಗ್ರವಿದ್ಯೆಯ ಸರ್ವಸ್ವ ಎಂಬುದೂ ಗಮನಾರ್ಹ.

ದ್ರೌಪದಿಯ ಧಾರ್ಮಿಕಸ್ಫೂರ್ತಿಯನ್ನು ಇತರ ಪತಿವ್ರತೆಯರೂ ಅನುಕರಿಸುವಂತಾಗಬೇಕು. ಅಲ್ಲದೆ, ದ್ರೌಪದಿಯ ಪಾತಿವ್ರತ್ಯವನ್ನು ವಿವೇಚಿಸಿ, ದೃಢಪಡಿಸಿಕೊಂಡು ಆ ಪ್ರಯುಕ್ತ ಪುಣ್ಯ ಪಡೆಯುವಂತಾಗಬೇಕು.

'ಪಾತಿವ್ರತ್ಯದ ಪ್ರಾತ್ಯಕ್ಷಿಕೆ' ಈ ಉದ್ದೇಶಕ್ಕಾಗಿಯೇ ಹೊರಟಿದೆ. ಪಾತಿವ್ರತ್ಯಕ್ಕೆ ಪ್ರಾತ್ಯಕ್ಷಿಕೆಯನ್ನು ಒದಗಿಸುವಂತೆ ಬದುಕಿದ್ದ ಶ್ರೀಮತಿ ವನಜಾಕ್ಷಿ ವೇಂಕಟ ರಮಣಾಚಾರ್ಯ ಆತ್ತೂರು ಇವರ ಸವಿನೆನಪಿಗಾಗಿ, ಅವರ ವರ್ಷಾಂತಿಕದ ಸಂದರ್ಭದಲ್ಲಿ ಈ ಕೃತಿ ಪ್ರಕಟಗೊಂಡಿದ್ದು, ಈ ಹಿನ್ನೆಲೆಯಲ್ಲೂ ಇದು ಅನ್ವರ್ಥಕ ಹೆಸರನ್ನು ಪಡೆದಂತಾಗಿದೆ.

- ಈ ಕೃತಿಗೆ ಅನುಗ್ರಹಸಂದೇಶ ನೀಡಿ ಹಾಗೂ ಕೃತಿಯನ್ನು ಉದ್ಘಾಟನೆಗೊಳಿಸಿ ಶ್ರೀಮುಖ್ಯಪ್ರಾಣಾಂತರ್ಗತಶ್ರೀಕೃಷ್ಣನ ಪಾದಾರವಿಂದಕ್ಕೆ ಸಮರ್ಪಿಸುವ ಮೂಲಕ

ಅನುಗ್ರಹಿಸಿರುವ ಪರ್ಯಾಯ ಅದಮಾರು ಮಠಾಧೀಶರಾದ ಶ್ರೀಶ್ರೀ ವಿಶ್ವ ಪ್ರಿಯತೀರ್ಥರಿಗೆ ಪ್ರಣಾಮಪೂರ್ವಕ ಕೃತಜ್ಞತೆ.

- ಅಕ್ಷರ ಜೋಡಣೆಯನ್ನು ನಡೆಸಿದ ಶ್ರೀ ಪದ್ಮನಾಭ ಕೇಕುಣ್ಣಾಯರಿಗೆ, ಮುದ್ರಣ ಕಾರ್ಯ ನಡೆಸಿದ 'ಪ್ರಕಾಶ ಆಫ್‌ಸೆಟ್', ಮಂಗಳೂರು ಇದರ ಬಂಧುಗಳಿಗೆ ಹಾಗೂ ರಕ್ಷಾಪುಟಗಳ ವಿನ್ಯಾಸ ನಡೆಸಿದ ಗೋಪ್ಯ ಕಂಪ್ಯೂಟರ್ಸ್‌ನ ಬಂಧುಗಳಿಗೆ ಕೃತಜ್ಞತೆಗಳು.

ಪತಿವ್ರತಾಸ್ತ್ರೀಯರಿಗೆ ಪಾತಿವ್ರತ್ಯಾನುಷ್ಠಾನದಲ್ಲಿ ಕೆಲವು ಅಂಶಗಳಲ್ಲಾದರೂ ಈ ಕೃತಿ ಸ್ಫೂರ್ತಿಪ್ರದವಾದರೆ ನಮ್ಮ ಶ್ರಮ ಸಾರ್ಥಕ.

ತನ್ನ ಮಾತೃಶ್ರೀಯವರ ಸವಿನೆನಪಿಗಾಗಿ ಈ ಕೃತಿಯನ್ನು ರೂಪಿಸಲು ವಿಶೇಷ ವಾಗಿ ಪ್ರೋತ್ಸಾಹಿಸಿದ ನನ್ನ ಸಹಧರ್ಮಿಣಿ ಶ್ರೀಮತಿ ಸರಸ್ವತಿಗೆ ಮಾತೃಶ್ರೀಯವರ ವಿಶೇಷಾನುಗ್ರಹ ದೊರಕುವಂತಾಗಲಿ.

ತಾರಣ ಸಂ|ದ ಆಷಾಢ ಪ್ರಥಮೈಕಾದಶೀ **ಸಗ್ರಿ ರಾಘವೇಂದ್ರ ಉಪಾಧ್ಯಾಯ**

ಪರವಿದ್ಯಾ ಪ್ರಕಾಶನ, ಮೂಡುಸಗ್ರಿ.

## ಭಾಗವತಪ್ರತಿಪಾದ್ಯ ಶ್ರೀಕೃಷ್ಣನ ಆರ್ಥಿಕವ್ಯವಸ್ಥೆಯ ಚಮತ್ಕಾರ

1998 ಜೂನ್ 8ರಿಂದ ಮುಂಬಯಿಯ ಶ್ರೀಯುತ ಲಕ್ಷ್ಮೀಯಾದವ ಆಚಾರ್ಯರ ನಿವಾಸದಲ್ಲಿ ಭಾಗವತ ಸಪ್ತಾಹ ನಡೆದಿದ್ದು ಅದರದ್ದು ಸಮಗ್ರ ವೀಡಿಯೋ ಕ್ಯಾಸೆಟ್ ರೂಪಿತವಾಗಿತ್ತು. ಶ್ರೀಯುತ ಆಚಾರ್ಯರ ಸುಪುತ್ರಿಯ ಮೂಲಕ ಅದು ಅಮೇರಿಕಾದ ವಿಶ್ವ ಮಾಧ್ವ ಸಂಘದ ಸಾಧಕರಿಗೆ ತಲುಪಿ ಅವರು ಒಂದು ವರ್ಷದ ಅವಧಿಯಲ್ಲಿ ಪ್ರತಿಯೊಂದು ಏಕಾದಶಿಯಂದು ಅದನ್ನು ನೋಡಿ, ಕೇಳಿ ಸಾಧನೆ ನಡೆಸಿರುವರು. ಭಾಗವತ ಪ್ರವಚನಕಾರರಿಗೆ ಸಂಭಾವನೆಯನ್ನು ನೀಡಲೂ ಮರೆತಿಲ್ಲ. ಅವರು ಶ್ರದ್ಧೆಯಿಂದ, ಭಕ್ತಿಯಿಂದ ನೀಡಿದ ಆ ಸಂಭಾವನೆಯನ್ನು ಈ ಕೃತಿಯ ಪ್ರಕಟನೆಗಾಗಿ ಬಳಸಲಾಗಿದೆ.

ಇದರಿಂದಾಗಿ ಭಾಗವತ ಸಪ್ತಾಹದ ವೀಡಿಯೋ ಕ್ಯಾಸೆಟ್‌ನ ಮೂಲಕ ಸಾಧನೆ ನಡೆಸಿದ ಆ ಸಾಧಕರಿಗೂ ಅದಕ್ಕೆ ಬೇಕಾದ ಸೌಲಭ್ಯ ಒದಗುವಂತೆ ಮುಂಬಯಿಯಲ್ಲಿ ಭಾಗವತ ಸಪ್ತಾಹವನ್ನು ವ್ಯವಸ್ಥೆಗೊಳಿಸಿದ್ದ ಹರಿಗುರುಭಕ್ತ ಲಕ್ಷ್ಮೀಯಾದವ ಆಚಾರ್ಯ ದಂಪತಿಗಳಿಗೂ ಭಾಗವತಪ್ರತಿಪಾದ್ಯ ಶ್ರೀಕೃಷ್ಣ ವಿಶೇಷವಾಗಿ ಅನುಗ್ರಹಿಸಲಿ.

ಸರ್ವಜ್ಞಪೀಠ ಸಂದೇಶ .......

## ಕೃಷ್ಣೆಯ ಪಾತಿವ್ರತ್ಯ ಮತ್ತು ಕೃಷ್ಣನ ಏಕಪತ್ನೀವ್ರತ



ಸ್ತ್ರೀಯರ ಗುಣಗಳಲ್ಲಿ ಮೊದಲಿನ ಸ್ಥಾನವೇ ಪಾತಿವ್ರತ್ಯಕ್ಕೆ. ಮಾನವರಾದವರು ದೇವರ ಪೂಜೆಯನ್ನು ಮಾಡಲೇ ಬೇಕು. ಅಪ್ರಬುದ್ಧರಾದ ಮಾನವರಿಗೆ ದೇವರ ಪೂಜೆಗೆ ಪ್ರತಿಮೆಯೇ ಮಾಧ್ಯಮ. ಪುರುಷರು ಜಡ ಪ್ರತಿಮೆಗಳನ್ನು ಇಟ್ಟು ಕೊಳ್ಳುವರು. ಸ್ತ್ರೀಯರಿಗೆ ಪತಿಯೇ ಪ್ರತಿಮೆ. ಇದು ಚಲ ಪ್ರತಿಮೆ. ಆದ್ದರಿಂದ ಒಂದು ರೀತಿಯಲ್ಲಿ ಪುರುಷರಿಗಿಂತ ಸ್ತ್ರೀಯರೇ ಉತ್ತಮರು. ಪತಿಯಲ್ಲಿ ದೇವರ ಉಪಾಸನೆಯಿಂದ ದೇವರಿಗೆ ಸಂತೋಷವಾಯಿತೋ ಎಂದು ಪತಿಯ ಮುಖಪ್ರಸನ್ನತೆಯಿಂದ ತಿಳಿಯಬಹುದಾಗಿದೆ. ಈ ಸೌಕರ್ಯ ಪುರುಷರಿಗಿಲ್ಲ. ಆದ್ದರಿಂದಲೇ ನಮ್ಮ ಸಂಸ್ಕೃತಿಯಲ್ಲಿ ಸ್ತ್ರೀಯರಿಗೆ ವಿಶೇಷ ಸ್ಥಾನಮಾನ. ಸ್ತ್ರೀಯರಿಗೆ ಪತಿವ್ರತೆಯರು ಎಂದು ಹೇಳುವಾಗ ಏಕಪತಿವ್ರತೆಯರು ಎಂದು ಹೇಳುವುದಿಲ್ಲ. ಆದರೆ ಪುರುಷರಿಗೆ ಏಕ ಎಂಬ ವಿಶೇಷಣವನ್ನು ಹಾಕಿ ಏಕಪತ್ನೀವ್ರತ ಎಂದು ಹೇಳುವುದಿದೆ. ಇದರಿಂದಾಗಿ ಹೆಮ್ಮಕ್ಕಳಿಗೆ ಒಬ್ಬನೇ ಪತಿ ಎಂಬುದು ಸಾಮಾನ್ಯ ನಿಯಮ ಎಂದು ತಿಳಿಯುತ್ತದೆ.

ಆದರೆ ಮಾನವರಿಗೆ ಮೀರಿದ ಒಂದು ಪಾತಿವ್ರತ್ಯ ಇದೆ. ಇದು ದೇವತೆಗಳಿಗೆ ಮಾತ್ರ ಸೀಮಿತ. ಇದಕ್ಕೆ ಉದಾಹರಣೆ ದ್ರೌಪದಿ. ಈ ಕನ್ಯೆ ಅನೇಕ ಪತಿಗಳುಳ್ಳವಳಾದರೂ ಪತಿವ್ರತೆಯೇ ಆಗಿ ಉಳಿದಳು. ಈರೀತಿಯಾದದ್ದು ದೈತ್ಯರಿಗೂ ಇರಲಿಕ್ಕಿಲ್ಲ. ಯಾಕೆಂದರೆ ಸುಂದೋಪಸುಂದರು ತಿಲೋತ್ತಮೆಗಾಗಿ ಪ್ರಾಣ ತೆತ್ತರು. ಅನೇಕ ಪತಿಗಳನ್ನು ಕಟ್ಟಿಕೊಂಡು ಪತಿವ್ರತೆಯಾದಳು ದ್ರೌಪದೀ. ಅನೇಕ ಪತ್ನಿಯರನ್ನು ಕಟ್ಟಿಕೊಂಡು ಏಕಪತ್ನೀ ವ್ರತನಾದ ಶ್ರೀ ಕೃಷ್ಣ. ಇದು ಎರಡು

ಹೇಗೆ ಎಂಬುದನ್ನು ಭಾರತ ಭಾಗವತಗಳು ತಿಳಿಸುತ್ತವೆ. ಆದ್ದರಿಂದ ದ್ರೌಪದಿಗೆ ಐವರು ಪತಿಗಳೆಂದು ತಿಳಿಸುವ ಭಾರತವನ್ನು ಅರ್ಧ ಓದಿ ಅವಳ ಪಾತಿವ್ರತ್ಯದ ಬಗ್ಗೆ ಶಂಕೆಯನ್ನು ಲೋಕದಲ್ಲಿ ಡಂಗುರ ಸಾರಿ ತಮ್ಮ ಅಪ್ರಬುದ್ಧತೆಯನ್ನು ಪ್ರಕಟಿಸುವುದಕ್ಕಿಂತ ಪೂರಾ ಓದಿ ಅವಳು ಪಾತಿವ್ರತ್ಯವನ್ನು ಹೇಗೆ ಕಾಪಾಡಿ ಕೊಂಡಳು ಎಂದು ತಿಳಿಸುವುದು ಒಳಿತು. ಕೈ ಹಿಡಿದ ಪತಿಯನ್ನು ಯೋಗ್ಯ ದಾರಿಯಲ್ಲಿ ಹಚ್ಚುವ ಕ್ರಮವನ್ನು ದ್ರೌಪದಿಯು ಭಾಮೆಯ ಮೂಲಕ ಸಮಾಜಕ್ಕೆ ತಿಳಿಸುತ್ತಾಳೆ. ಸಾತ್ವಿಕ ಕ್ರಮದಿಂದ ಪತಿಯ ಮನವನ್ನು ಗೆದ್ದು ಸಮಾಜವನ್ನು ಗೆಲ್ಲಬೇಕು. ಇದು ಪತಿವ್ರತೆಯ ಲಕ್ಷಣ.



ನಮ್ಮ ಸಗ್ರಿ ಶ್ರೀ ರಾಘವೇಂದ್ರಉಪಾಧ್ಯಾಯರು ನಮ್ಮ ಸ್ತ್ರೀಯರಿಗೆ ಅಗತ್ಯ ಬೇಕಾದ ಈ ಗುಣವನ್ನು ದ್ರೌಪದಿಯು ಮೂಲಕ ಸಮಾಜಕ್ಕೆ ಕೊಡುತ್ತಿದ್ದಾರೆ. ಸ್ತ್ರೀಯರು ಚೆನ್ನಾಗಿದ್ದರೆ ಸಮಾಜವು ಆರೋಗ್ಯ ವಾಗಿರುತ್ತದೆ. ಆದ್ದರಿಂದ "ಪಾತಿವ್ರತ್ಯದ ಪ್ರಾತ್ಯಕ್ಷಿಕೆ" ಎಂಬ ಈ ಪುಸ್ತಕದ ಉಪಯೋಗವನ್ನು ಎಲ್ಲಾ ಜನರು ಪಡೆಯಲಿ. ಸಮಾಜದ ಸ್ವಾಸ್ಥಕ್ಕೆ ತಮ್ಮ ಕಾಣಿಕೆಯನ್ನು ಸಲ್ಲಿಸಲಿ. ಈ ಪುಸ್ತಕವನ್ನು ಬರೆದಿರುವ ಸಗ್ರಿಯವರಿಗೆ ಉಡುಪಿ ಶ್ರೀಕೃಷ್ಣ ಮುಖ್ಯಪ್ರಾಣರ ಅನುಗ್ರಹ ಸದಾ ಇರಲಿ.

ತಾರಣ ಸಂ| ಆಷಾಢ ಕೃಷ್ಣ ಪ್ರತಿಪತ್

(ಶ್ರೀ ಶ್ರೀವಿಶ್ವಪ್ರಿಯತೀರ್ಥರು)
ಪರ್ಯಾಯ ಅದಮಾರು ಮಠ
ಶ್ರೀ ಕೃಷ್ಣ ಮಠ, ಉಡುಪಿ

# ವಿಷಯಾನುಕ್ರಮಣಿಕೆ

# ದ್ರೌಪದಿಯ ಪರಿಶುದ್ಧ ಪಾತಿವ್ರತ್ಯ



ಪತಿಯ ಸೇವೆಯನ್ನೇ ತನ್ನ ಜೀವನವ್ರತವನ್ನಾಗಿಟ್ಟುಕೊಂಡು ನಡೆದುಕೊಳ್ಳುವುದೇ 'ಪಾತಿವ್ರತ್ಯ' ಎನಿಸಿದೆ. ಇದು ಸ್ತ್ರೀಯರ ಶ್ರೇಷ್ಠ ಧರ್ಮ.

ಇದನ್ನು ಪೂರ್ಣ ಪ್ರಮಾಣದಲ್ಲಿ ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಯಶಸ್ವಿಯಾದವರಲ್ಲಿ ಸೀತಾ, ರುಗ್ಮಿಣೀ ಮುಂತಾದ ಸಾಕ್ಷಾಲ್ಲಕ್ಷ್ಮೀರೂಪಗಳ ಅನಂತರ ದ್ರೌಪದೀದೇವಿಯೇ ಮೊದಲಿಗಳು.

## ನಾಜೂಕಾದ, ಪವಿತ್ರವಾದ ಪಾತಿವ್ರತ್ಯ:

ಐದು ಪತಿಗಳನ್ನು ಹೊಂದಿಯೂ 'ಪತಿವ್ರತಾಶಿರೋಮಣಿ' ಎನಿಸಿರುವ ದ್ರೌಪದಿಯ ಪಾತಿವ್ರತ್ಯ ತುಂಬ ನಾಜೂಕು ಹಾಗೂ ಅಷ್ಟೇ ಪವಿತ್ರ. ಮಹಾಭಾರತದಲ್ಲಿ ಶ್ರೀವೇದವ್ಯಾಸರಿಂದ ಅಸ್ಪಷ್ಟವಾಗಿ ಸೂಚಿತವಾಗಿರುವ,[1] ಶ್ರೀಮಧ್ವಾಚಾರ್ಯರಿಂದ ತಮ್ಮ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಸ್ಪಷ್ಟವಾಗಿ ಬೆಳಗಿಸಲ್ಪಟ್ಟಿರುವ ಪಂಚದೇವೀಸಮಾವೇಶದ ದ್ರೌಪದಿಯ ವಿಶಿಷ್ಟ ವ್ಯಕ್ತಿತ್ವದ ರಹಸ್ಯವನ್ನು ವಿವೇಚಿಸಿಕೊಳ್ಳದವರಿಗೆ ಸುಲಭದಲ್ಲಿ ಅರಗಿಸಿಕೊಳ್ಳಲಾಗದ ಪಾತಿವ್ರತ್ಯ ದ್ರೌಪದಿಯದು. ಶ್ರೀ ಮಧ್ವಾಚಾರ್ಯರು ಸ್ಪಷ್ಟಪಡಿಸಿರುವಂತೆ ದ್ರೌಪದಿಗೆ ಯಮ, ವಾಯು, ಇಂದ್ರ, ಅಶ್ವಿನೀದೇವತೆಗಳ ಅವತಾರರಾದ ಯುಧಿಷ್ಠಿರ, ಭೀಮಸೇನ, ಅರ್ಜುನ ಹಾಗೂ ನಕುಲಸಹದೇವರು –ಹೀಗೆ ಐದು ಪತಿಯರು ಇದ್ದಂತೆ ಅವಳ ದೇಹದಲ್ಲಿ ಭಾರತೀದೇವಿಯ ಜೊತೆಗೆ ಪಾರ್ವತೀ, ಶ್ಯಾಮಲಾ, ಶಚೀ ಹಾಗೂ ಉಷಾ –ಹೀಗೆ ಯಮಾದಿ ದೇವತೆಗಳ ಪತ್ನಿಯರಾದ ನಾಲ್ಕು ದೇವಿಯರೂ ಸೇರಿಕೊಂಡಿದ್ದರು. ಇದರ ಹಿನ್ನೆಲೆಯಾಗಿ ಚತುರ್ಮುಖನ ಎರಡು ಶಾಪಗಳು, ರುದ್ರನ ಶಾಪ, ಭಾರತೀದೇವಿಯ ವರ

---

1. ಮಹಾಭಾರತ ಆದಿಪರ್ವದ 196ನೇ ಅಧ್ಯಾಯದಲ್ಲಿ ಸೂಚಿತವಾಗಿದೆ.

–ಇವೆಲ್ಲ ಪಾತ್ರವಹಿಸಿವೆಯಾದರೂ[2] ಘಟನೆಯನ್ನು ಹೀಗೆ ಸಂಯೋಜಿಸುವುದ ಕ್ಕಾಗಿಯೇ ಶಾಪ ವರಗಳ ಸೃಷ್ಟಿ ನಡೆದಂತೆ ಕಂಡರೂ ಆಶ್ಚರ್ಯವಿಲ್ಲ.

ಹೌದು ಎನ್ನುವರು ಶ್ರೀ ಮಧ್ವರು. 'ಅನಾದಿಸಂಕಲ್ಪ'ನಾದ ಭಗವಂತ ಘಟನೆಗಳನ್ನು ಹೀಗೆಯೇ ನಡೆಯಬೇಕೆಂದು ಸಂಕಲ್ಪಿಸಿ, ಅವುಗಳ ಸಂಯೋಜನೆ ಗಾಗಿ ಬೇರೆ ಬೇರೆ ವ್ಯಕ್ತಿಗಳಿಂದ ಶಾಪವನ್ನೋ ವರವನ್ನೋ ಕೊಡಿಸುವನು.[3] ದ್ರೌಪದಿಯ ಐದು ದೇವಿಯರ ಸಮಾವೇಶದ ವಿಶಿಷ್ಟ ವ್ಯಕ್ತಿತ್ವ ರೂಪು ಗೊಳ್ಳುವಲ್ಲೂ ಭಗವಂತನ ಸಂಕಲ್ಪವೇ ಮೂಲ ಕಾರಣವಾಗಿದ್ದು, ಅದರ ಈಡೇರಿಕೆಗಾಗಿ ಚತುರ್ಮುಖಾದಿಗಳಿಂದ ಶಾಪಾದಿಗಳು ಕೊಡಿಸಲ್ಪಟ್ಟಿವೆ ಎಂಬುದು ನಿಜವಾದ ಸಂಗತಿ.

## ರಮಣ ಪ್ರಕ್ರಿಯೆಯ ವೈಚಿತ್ರ್ಯ

ದ್ರೌಪದಿಯ ವ್ಯಕ್ತಿತ್ವ ಹೇಗೋ ಹಾಗೆಯೇ ಪತಿಯರೊಂದಿಗೆ ಜೊತೆ-ಗೂಡುವ ಪ್ರಕ್ರಿಯೆಯೂ ತುಂಬ ವೈಶಿಷ್ಟ್ಯಪೂರ್ಣವಾದುದು.

ಶ್ಯಾಮಲಾ, ಭಾರತೀ, ಶಚೀ ಹಾಗೂ ಉಷಾ –ಈ ನಾಲ್ಕು ದೇವಿಯರ ಅಭಿಮಾನಕ್ಕೆ ಪಾತ್ರವಾಗಿದ್ದ ದ್ರೌಪದಿಯ ಶರೀರದಲ್ಲಿ ದ್ರೌಪದಿ ನಾಲ್ಕು ಸ್ವರೂಪಗಳಿಂದ ಇದ್ದು, ಶ್ಯಾಮಲಾ ಸ್ವರೂಪದಿಂದ ಧರ್ಮರಾಜನೊಂದಿಗೆ, ಭಾರತೀ ಸ್ವರೂಪದಿಂದ ಭೀಮಸೇನನೊಂದಿಗೆ, ಶಚೀಸ್ವರೂಪದಿಂದ ಅರ್ಜುನ ನೊಂದಿಗೆ, ಉಷಾ ಸ್ವರೂಪದಿಂದ ನಕುಲಸಹದೇವರೊಂದಿಗೆ –ಹೀಗೆ ನಾಲ್ಕು ಸ್ವರೂಪಗಳಿಂದ ಐದು ಮಂದಿ ಪಾಂಡವರೊಂದಿಗೆ ಬೇರೆ ಬೇರೆಯಾಗಿಯೇ ರಮಿಸುತ್ತಿದ್ದಳು.[4]

---

2. ಮಹಾಭಾರತತಾತ್ಪರ್ಯನಿರ್ಣಯದ 18ನೇ ಅಧ್ಯಾಯದ 108ನೇ ಶ್ಲೋಕದಿಂದ 150ನೇ ಶ್ಲೋಕದ ವರೆಗೆ ಈ ಪ್ರಮೇಯ ಪ್ರತಿಪಾದಿತವಾಗಿದೆ.

3. ಯತ್ತದ್ ಭಗವತಾ ಕ್ಲಪ್ತಂ ತದೇವ ನಿಯತಂ ಭವೇತ್ ।
ಅತೋಽನ್ಯೇಷಾಂ ವರಃ ಶಾಪೋ ಗುಣದೋಷ ಪ್ರಕರ್ತೃತಾ ।
ಸ್ವತಃ ಪ್ರಾಪ್ತಾದ್ ಭೇದಕೃತಿಃ..... ಭಗವದ್ವಶತಾ ಯಸ್ಮಾತ್
ಸರ್ವೇಷಾಂ ಜ್ಞೇಯಮೇವ ತತ್ –ಪ್ರಕಾಶಸಂಹಿತಾ
– [ಭಾಗ. ತಾ. ನಿ. 6-17-30]

4. ಕೃಷ್ಣಾ ಚ ತೇಷು ಪೃಥಗೇವ ಚತುಃಸ್ವರೂಪಾ
ರೇಮೇ ತಥೈಕತನುರಪ್ಯಭಿಮಾನಿಭೇದಾತ್ ॥ – [ಮ.ಭಾರ.ತಾ.ನಿ. 19-183]

ಧರ್ಮರಾಜ ದ್ರೌಪದಿಯೊಡನೆ ರಮಿಸುವ ದಿನದಲ್ಲಿ ಶಚೀ ಹಾಗೂ ಉಷಾದೇವಿಯರಿಗೆ ದ್ರೌಪದೀಶರೀರದಲ್ಲಿ ಅಭಿಮಾನ ನಾಶವಾಗುತ್ತಿತ್ತು. ಶ್ಯಾಮಲೆಗೆ ಅಭಿಮಾನ ಉತ್ಪತ್ತಿಯಾಗುತ್ತಿತ್ತು. ಭಾರತಿಗೆ ಸ್ವಲ್ಪ ಅಭಿಮಾನ ಹಾಗೆಯೇ ಇರುತ್ತಿತ್ತು. ಇದರಿಂದ ಧರ್ಮರಾಜ ಶ್ಯಾಮಲೆಯೊಂದಿಗೆ ರಮಿಸುವಾಗ ಧರ್ಮರಾಜನೊಳಗೆ ಆವಿಷ್ಟನಾದ ವಾಯುದೇವ ಭಾರತಿಯೊಂದಿಗೆ ರಮಿಸುತ್ತಿದ್ದ. ಹೀಗೆಯೇ ಅರ್ಜುನ, ನಕುಲಸಹದೇವ ಇವರು ತಮ್ಮ ತಮ್ಮ ಪತ್ನಿಯರೊಂದಿಗೆ ರಮಿಸುವಾಗ ಅವರಲ್ಲಿ ಆವಿಷ್ಟನಾಗಿದ್ದ ವಾಯುದೇವ ಭಾರತಿಯೊ ದಿಗೆ ರಮಿಸುತ್ತಿದ್ದ. ಭೀಮ ದ್ರೌಪದಿಯೊಂದಿಗೆ ರಮಿಸುವ ದಿನದಲ್ಲಿ ದ್ರೌಪದೀಶರೀರದಲ್ಲಿ ಭಾರತಿಗೆ ಪೂರ್ಣ ಅಭಿಮಾನ. ಭಾರತಿಯೊಂದಿಗೇ ಭೀಮ ರಮಿಸುತ್ತಿದ್ದ. ಶಚೀ ಉಷೆಯರಿಗೂ ತಮ್ಮ ಪತಿಯರೊಂದಿಗೆ ರಮಿಸುವ ದಿನದಲ್ಲಿ ದ್ರೌಪದಿಯ ಶರೀರದಲ್ಲಿ ಹೊಸತಾಗಿ ದೇಹಾಭಿಮಾನ ಉಂಟಾಗುತ್ತಿತ್ತು. ಜೀವರ ಪಾಲಿಗೆ ಆಯಾ ಶರೀರದ ಬಗ್ಗೆ ಅಭಿಮಾನ ಉಂಟಾಗುವುದೇ ಜನನ; ಅಂತಹ ಅಭಿಮಾನ ನಾಶವಾಗುವುದೇ ಮರಣ. ಆದುದರಿಂದ ಶ್ಯಾಮಲಾದಿ ದೇವಿಯರು ಪ್ರತಿನಿತ್ಯ ದ್ರೌಪದೀದೇಹದ ಬಗ್ಗೆ ಅಭಿಮಾನವನ್ನು ಹೊಸತಾಗಿ ಪಡೆದುಕೊಳ್ಳುತ್ತಲೂ ಕಳೆದುಕೊಳ್ಳುತ್ತಲೂ ಇದ್ದ ಪ್ರಯುಕ್ತ ಮರಣಜನನಗಳಿಗೊಳಗಾಗಿ ಪ್ರತಿನಿತ್ಯ ಕನ್ಯೆಯರೆನಿಸುತ್ತಿದ್ದರು.[5] ಆದುದರಿಂದ ಅಂತಹವಳ ಸಂಪರ್ಕ ಪರಿಶುದ್ಧವಾಗಿತ್ತೇ ವಿನಾ ವ್ಯಭಿಚಾರ ಎನಿಸುತ್ತಿರಲಿಲ್ಲ.

ಧರ್ಮರಾಜ ಮುಂತಾದವರಲ್ಲಿ ಪ್ರವಿಷ್ಟನಾದ ವಾಯುದೇವ ಸದಾ ಅವರ ಬುದ್ಧಿಯನ್ನು ಭಾರತೀದೇವಿಯ ವಿಷಯದಲ್ಲಿ ನಿಷ್ಕ್ರಿಯಗೊಳಿಸಿಯೇ ಅವಳೊಡನೆ ರಮಿಸುತ್ತಿದ್ದ. ಆದುದರಿಂದ ದ್ರೌಪದಿ ಶುದ್ಧಳೇ ಆಗಿರುತ್ತಿದ್ದಳು. ಪ್ರತಿದಿನದಲ್ಲೂ ಮರಣದಲ್ಲಿ ಹೇಗೋ ಹಾಗೆ ಬುದ್ಧಿಗೆ ನಿಷ್ಕ್ರಿಯತೆ ಬರುತ್ತಿದ್ದುದರಿಂದ ಮೃತಳಾದವಳು ಮತ್ತೆ ಬದುಕಿದಂತಾಗಿ ಕನ್ಯೆ ಆಗುತ್ತಿದ್ದಳು.

---

5. ಬಭೂವ ಕನ್ಯೈವ ಗತೇ ಗತೇಽಹನಿ..... – [ಮ.ಭಾರ.]

- ಕನ್ಯೈವ ಸಾಭವದತಃ ಪ್ರತಿವಾಸರಂ ಚ
  ಜನ್ಮಾಭವದ್ಧ್ಯಭಿಮತೇಃ ಪೃಥಗೇವ ನಾಶಾತ್ ।
  ಪ್ರಾಯೋ ಹಿ ನಾಭಿಮತಿನಾಶಮುವಾಪ ವಾಣೀ
  ತಸ್ಮಾನ್ಮರುಚ್ಚ ಸಕಲೇಷ್ವಭಿವಿಷ್ಟ ಆಸೀತ್ ॥ – [ಮ.ಭಾರ.ತಾ.ನಿ. 19-184]

ದೇವಿಯರ ಪಾಲಿಗೆ ಆ ಬಗೆಯ ಅವಸ್ಥೆ ಮರಣ ಎನಿಸುವಂತಿತ್ತೇ ಹೊರತು ಸುಷುಪ್ತಿಯಾಗಲೀ ಮೂರ್ಛಾವಸ್ಥೆಯಾಗಲೀ ಎನಿಸುವಂತಿರಲಿಲ್ಲ. ಯಾಕೆಂದರೆ ಮತ್ತೊಬ್ಬರ ಅಭಿಮಾನಕ್ಕೆ ಪಾತ್ರವಾಗಿದ್ದುದರಿಂದ ಸುಷುಪ್ತಿ ಅಲ್ಲ; ಶ್ರೀಹರಿಯ ಸ್ಮರಣೆಯನ್ನು ನಡೆಸುತ್ತಿದ್ದುದರಿಂದ ಮೂರ್ಛಾವಸ್ಥೆ ಅಲ್ಲ. ಭೂತಾವೇಶದಂತೆಯೂ ಅಲ್ಲ. ಮರಣಾವಸ್ಥೆಯಲ್ಲಾದರೂ ಜ್ಞಾನಿಗಳಿಗೆ ಹರಿಸ್ಮರಣೆ ಇರುವುದರಿಂದ ಅದು ಅವರ ಪಾಲಿಗೆ ಮರಣಾವಸ್ಥೆಯೇ ಆಗಿತ್ತು. ಹೀಗೆ ಮರಣಕ್ಕೊಳಗಾದ ಅವರು ಪ್ರತಿನಿತ್ಯ ಹೊಸ ಜನನಕ್ಕೂ ಒಳಗಾಗುತ್ತಿದ್ದುದರಿಂದ ಕನ್ಯಾವಸ್ಥೆಯನ್ನು ಪಡೆಯುತ್ತಿದ್ದರು.[6] ಆದುದರಿಂದ ಪವಿತ್ರರಾಗಿದ್ದರು.

ವಾಯುದೇವ ಯುಧಿಷ್ಠಿರಾದಿಗಳಲ್ಲಿ ಆವಿಷ್ಟನಾಗಿದ್ದುಕೊಂಡು ಯುಧಿಷ್ಠಿರಾದಿಗಳು ಶ್ಯಾಮಲಾದಿಗಳ ಜೊತೆಗೆ ರಮಿಸುವಾಗ ಹಾಗೂ ಭೀಮರೂಪದಿಂದ ಭಾರತೀದೇವಿಯೊಡನೆಯೇ ರಮಿಸುತ್ತಿದ್ದನು. ಭಾರತೀದೇವಿಯೊಡನೆ ರಮಣ ವಾಯುದೇವನಿಗೆ ಮಾತ್ರ.[7]

ಹೀಗೆ ದ್ರೌಪದಿಯ ಶರೀರದಲ್ಲಿ ಅಭಿಮಾನಿಗಳಾಗಿದ್ದ ಭಾರತೀದೇವಿಗಾಗಲೀ, ಶ್ಯಾಮಲಾ, ಶಚೀ, ಉಷಾದೇವಿಯರಿಗಾಗಲೀ ತಮ್ಮ ತಮ್ಮ ನಿಯತ ಪತಿಯರ ಸಂಪರ್ಕವೇ ಆಗುತ್ತಿತ್ತು. ಆದುದರಿಂದ ಅಂತಹ ತೀರಾ ಸಂಕೀರ್ಣ ಪ್ರಸಂಗಗಳಲ್ಲೂ ದ್ರೌಪದಿಯ ಪಾತಿವ್ರತ್ಯ ಸ್ವಲ್ಪವೂ ಕೆಡದೆ ಪರಮಪವಿತ್ರವಾಗಿಯೇ ಇತ್ತು.

ಮಹಾಭಾರತದಲ್ಲಿ ಅಸ್ಪಷ್ಟವಾಗಿ ಸೂಚಿತವಾಗಿರುವ ದ್ರೌಪದಿಯ ಪಾತಿವ್ರತ್ಯಕ್ಕೆ ಚ್ಯುತಿ ತರದೆ ರಮಿಸುವ ಪ್ರಕ್ರಿಯೆಯನ್ನು ಸ್ಪಷ್ಟಪಡಿಸಿರುವ ಮಧ್ವರು ಸಮರ್ಥನೆಯ ಉಪಸಂಹಾರದಲ್ಲಿ ಮಾಡಿರುವ ಉದ್ಘೋಷಣೆ–

ದೇವತೆಗಳು ಭೋಗಿಸುವ ಪದ್ಧತಿಯೇ ಬೇರೆ; ಮನುಷ್ಯರ ಭೋಗದ

---

6. ನೋ ಸುಪ್ತಿವತ್ ತ್ರಿದಮತೋಽನ್ಯವಶತ್ವತೋ ಹಿ
ದೇಹಸ್ಯ ಸಂಸ್ಮೃತಿತ ಏವ ಹರೇರ್ನ ಮೋಹಃ ।
ನಾವೇಶವಚ್ಚ ತತ ಏವ ಮೃತೇಃ ಸ್ವರೂಪ-
ಮೇತತ್ತ್ವತಃ ಪ್ರತಿದಿನಂ ಜನನಾದ್ಧಿ ಕನ್ಯಾ ॥ – [ಮ.ಭಾರ.ತಾ.ನಿ. 19-186]

7. ಏವಂ ಸ ವಾಯುರನುವಿಷ್ಟ ಯುಧಿಷ್ಠಿರಾದಿಭೀಮಾತ್ಮನೈವ ರಮತೇ ಸತತಂ ತಯೈಕಃ – [1-19-187]

ಕ್ರಮವೇ ಬೇರೆ. ಆದುದರಿಂದ ಮನುಷ್ಯರ ಭೋಗದ ಕ್ರಮವನ್ನಷ್ಟೇ ಬಲ್ಲವರು –ದ್ರೌಪದಿಯ ಶರೀರದ ಮಾಧ್ಯಮದಲ್ಲಿ ನಡೆದ ದೇವತೆಗಳ ಭೋಗದ ಬಗ್ಗೆ ಸಂಶಯವನ್ನು ಅಥವಾ ಅಸಂಭಾವನಾ ಶಂಕೆಯನ್ನು ತಾಳುವುದು ಸರಿಯಲ್ಲ.[8]

## ಕರ್ಣನ ಆರೋಪ ಮತ್ತು ಪ್ರಶಂಸೆ:

ದ್ರೌಪದೀದೇಹದ ಮಾಧ್ಯಮದಲ್ಲಿ ನಡೆದ ಭೋಗದ ಈ ರಹಸ್ಯವನ್ನು ಅರಿಯದೆ ದ್ರೌಪದಿಯ ಪಾವಿತ್ರ್ಯದ ಬಗ್ಗೆ ಅಪಸ್ವರ ಎತ್ತಿದವರಲ್ಲಿ ಮೊದಲಿಗ ಕರ್ಣ. ದುರ್ಯೋಧನನಾಗಲಿ ದುಃಶ್ಶಾಸನನಾಗಲೀ ಶಕುನಿಯಾಗಲಿ ದ್ರೌಪದಿಯ ವಿರುದ್ಧ ಮಾಡದ ವ್ಯಭಿಚಾರದ ಆರೋಪವನ್ನು ಕರ್ಣ ಹೊರಿಸಿದ್ದನು. ದ್ರೌಪದಿಯ ವಸ್ತ್ರಾಪಹರಣದ ಹೃದಯದ್ರಾವಕ ಸನ್ನಿವೇಶದಲ್ಲಿ ಕರ್ಣ ಈ ಬಗೆಯ ಕೆಟ್ಟ ಮಾತನ್ನು ಬೊಗಳಿದ್ದನು–

'ದೇವತೆಗಳು ಸ್ತ್ರೀಗೆ ಒಬ್ಬನೇ ಗಂಡ ಎಂದು ವಿಧಾನ ಮಾಡಿರುವರು. ಈ ದ್ರೌಪದಿಯಾದರೂ ಅನೇಕ ಗಂಡಂದಿರನ್ನು ಪಡೆದಿರುವವಳು. ಆದುದರಿಂದ ನಿಶ್ಚಿತವಾಗಿ ವೇಶ್ಯಾ ಎಂದು ಪರಿಗಣಿಸಲು ಯೋಗ್ಯಳು. ಇಂತಹವಳನ್ನು ಸಭೆಗೆ ಎಳೆದುಕೊಂಡು ಬರುವುದಾಗಲೀ, ಒಂದೇ ಉಡುಪು ತೊಟ್ಟಿರುವವಳನ್ನು ಕರೆತರುವುದಾಗಲೀ ವಿವಸ್ತ್ರಳಾಗಿರುವವಳನ್ನು ಎಳೆದು ತರುವುದಾಗಲೀ ತಪ್ಪಲ್ಲ ಎಂದು ನನ್ನ ಅನಿಸಿಕೆ.[9]

ಏಕವಸ್ತ್ರದ ದ್ರೌಪದಿಯನ್ನು ಸಭೆಗೆ ಎಳೆತಂದು ವಸ್ತ್ರಾಪಹರಣದ ಪ್ರವೃತ್ತಿಯಲ್ಲಿ ತೊಡಗಿದ್ದುದನ್ನು ಪ್ರತಿಭಟಿಸಿದ ವಿಕರ್ಣನನ್ನು ಆಕ್ಷೇಪಿಸುತ್ತ ಕರ್ಣ ಬೊಗಳಿರುವ ಮಾತುಗಳಿವು.

'ಸಹಸ್ರವರ್ಮ' ಎಂಬ ಅಸುರನ ಆವೇಶಕ್ಕೊಳಗಾಗಿ, ದುರ್ಯೋಧನನ

---

8. ಅನ್ಯಾದೃಶೀ ಹಿ ಸುರಭಕ್ತಿರತೋಽನ್ಯರೂಪಾ
ಮಾನುಷ್ಯಭುಕ್ತಿರಿತಿ ನಾತ್ರ ವಿಚಾರ್ಯಮಸ್ತಿ – [ಮ.ಭಾರ.ತಾ.ನಿ. 19-187]

9. ಏಕೋ ಭರ್ತಾ ಸ್ತ್ರಿಯಾ ದೇವೈರ್ವಿಹಿತಃ ಕುರುನಂದನ ।
ಇಯಂ ತ್ವನೇಕವಶನಾ ಬಂಧರೇತಿ ವಿನಿಶ್ಚಿತಾ ।
ಅಸ್ಯಾಃ ಸಭಾಮಾನಯನಂ ನ ಚಿತ್ರಮಿತಿ ಮೇ ಮತಿಃ ।
ಏಕಾಂಬರಧರತ್ವಂ ವಾಪ್ಯಥ ವಾಪಿ ವಿವಸ್ತ್ರತಾ ॥
– [ಮ.ಭಾರ.ತಾ.ನಿ. 68-35, 36]

ಪ್ರೀತಿಗಾಗಿ ದ್ರೌಪದಿಯ ಬಗ್ಗೆ ಇಂತಹ ಕೆಟ್ಟ ಮಾತುಗಳನ್ನು ಒದರಿರುವ ಕರ್ಣನೂ ಅದೇ ಸನ್ನಿವೇಶದಲ್ಲಿ ಕೆಲವು ಕ್ಷಣಗಳ ಅನಂತರ ತನಗೆ ಅರಿವಿಲ್ಲದೆಯೇ ದ್ರೌಪದಿಯನ್ನು ಬಾಯ್ತುಂಬ ಹೊಗಳಿದ್ದಾನೆ. ಧೃತರಾಷ್ಟ್ರ ಕೊಟ್ಟ ವರಗಳನ್ನು ದ್ರೌಪದಿ ತನ್ನ ಗಂಡಂದಿರ ಒಳಿತಿಗಾಗಿ ಕೇಳಿಕೊಂಡಾಗ ಹಾಗೂ ಕ್ಷತ್ರಿಯಸ್ತ್ರೀ ಎರಡೇ ವರಗಳನ್ನು ಕೇಳಬೇಕೆಂದು ಮೂರನೇ ವರವನ್ನು ಕೇಳಲು ನಿರಾಕರಿಸಿದಾಗ ಕರ್ಣ ಉದ್ಗರಿಸಿದ ಮಾತು–

'ಮನುಷ್ಯರಲ್ಲಿ ಸುಂದರಿಯರೆಂದು ಪರಿಗಣಿತರಾಗಿರುವ ಎಷ್ಟೆಷ್ಟು ಸ್ತ್ರೀಯರನ್ನು ನಾನು ಕೇಳಿದ್ದೇನೋ ಅವರಲ್ಲಿ ದ್ರೌಪದಿಯಷ್ಟು ಅದ್ಭುತ ಕಾರ್ಯವನ್ನು ನಡೆಸಿರುವವರು ಯಾರೂ ಇಲ್ಲ![10]

ಅಸುರಾವೇಶಕ್ಕೊಳಗಾಗಿ ದುರ್ಯೋಧನನ ಪ್ರೀತಿಗಾಗಿ ಕರ್ಣನು ದ್ರೌಪದಿಯ ಬಗ್ಗೆ ಕೆಟ್ಟ ಮಾತುಗಳನ್ನು ಹೇಳಿದ್ದರೂ ಆ ಕುರಿತು ಅವನಿಗೆ ಪಶ್ಚಾತ್ತಾಪ ಕಾಡುತ್ತಲೇ ಇತ್ತು. ಕೃಷ್ಣನ ಎದುರು ಅವನು ಅದನ್ನು ತೋಡಿಕೊಂಡಿರುವನು.[11]

ಆದರೂ ದ್ರೌಪದಿಯ ವಿಷಯದಲ್ಲಿ ಆ ಸಂದರ್ಭದಲ್ಲಿ ಕರ್ಣ ನಡೆದುಕೊಂಡದ್ದನ್ನೂ ಆಡಿದ್ದನ್ನೂ ಭಕ್ತವತ್ಸಲ ಶ್ರೀಕೃಷ್ಣ ಸಹಿಸುವುದಿಲ್ಲ. ರಣಾಂಗಣದಲ್ಲಿ ಕರ್ಣನ ರಥದ ಚಕ್ರ ಭೂಮಿಯಲ್ಲಿ ಹೂತುಹೋದ ಸಂದರ್ಭದಲ್ಲಿ ಕರ್ಣನು ತನ್ನ ಜೀವನ ತುಂಬ ಎಸಗಿದ ಮಹಾಪರಾಧಗಳನ್ನು ಉಲ್ಲೇಖಿಸುತ್ತ ಶ್ರೀಕೃಷ್ಣ ಮೊತ್ತಮೊದಲು[12] ಹಾಗೂ ನಾಲ್ಕು ಶ್ಲೋಕಗಳ ವ್ಯಾಪ್ತಿಯಲ್ಲಿ[13] ಕರ್ಣ ಆ ಸಂದರ್ಭದಲ್ಲಿ ದ್ರೌಪದಿಯ ವಿಷಯದಲ್ಲಿ ಅಸಭ್ಯವಾಗಿ ನಡೆದುಕೊಂಡದ್ದನ್ನೂ ನುಡಿದದ್ದನ್ನೂ ನೆನಪಿಸಿಕೊಡುವನು.

---

10. ಯಾ ನಃ ಶ್ರುತಾ ಮನುಷ್ಯೇಷು ಸ್ತ್ರಿಯೋ ರೂಪೇಣ ಸಮ್ಮತಾಃ ।
ತಾಸಾಮೇತಾದೃಶಂ ಕರ್ಮ ನ ಕಸ್ಯಾಶ್ಚನ ಶುಶ್ರುಮ ॥
– [ಮ.ಭಾರ.ಸಭಾ. 72-1]

11. ಯದಬ್ರುವಮಹಂ ಕೃಷ್ಣ ಕಟುಕಾನಿ ಸ್ಮ ಪಾಂಡವಾನ್ ।
ಪ್ರಿಯಾರ್ಥಂ ಧಾರ್ತರಾಷ್ಟ್ರಸ್ಯ ತೇನ ತಪ್ಯೇ ಹ್ಯಕರ್ಮಣಾ ॥
– [ಮ.ಭಾರ.ಉದ್ಯೋಗ. 141-45]

12. 'ಯದ್ ದ್ರೌಪದೀಂ.... – [ಕರ್ಣಪರ್ವ 91-2]

13. [ಕರ್ಣಪರ್ವ 91-7, 8, 9]

ಇದರಿಂದ ದ್ರೌಪದಿಯ ಪಾತಿವ್ರತ್ಯದ ಬಗ್ಗೆ ಆಕ್ಷೇಪಿಸುವುದಾಗಲೀ ಸಂದೇಹಪಡುವುದಾಗಲೀ ಶ್ರೀಕೃಷ್ಣನಿಗೆ ಎಷ್ಟು ಅಸಮಾಧಾನಕರವಾದುದೆಂಬುದು ಸ್ಪಷ್ಟವಾಗಬಲ್ಲದು.

## ಅತ್ತೆ ಕುಂತಿಯ ಪ್ರಶಂಸೆ:

ಸ್ವಯಂವರದ ಸಂದರ್ಭದಲ್ಲಿ '.....ನಾಹಂ ವರಯಾಮಿ ಸೂತಂ......'[14] –ನಾನೇನೂ ಸೂತನಾದ ಕರ್ಣನನ್ನು ವರಿಸುವುದಿಲ್ಲ –ಎಂದು ಗಟ್ಟಿಯಾಗಿ ಹೇಳುವ ಮೂಲಕ ದ್ರೌಪದಿಯಿಂದ ಅವಮಾನಿತನಾಗಿದ್ದ ಕರ್ಣ ಆ ಅವಮಾನದ ಉರಿಯ ಪ್ರತಿಕ್ರಿಯೆಯಾಗಿ ದ್ರೌಪದಿಯನ್ನು ನಿಂದಿಸಿದರೂ ಮರುಕ್ಷಣದಲ್ಲೇ 'ತಾನು ಎಷ್ಟೇ ಆಪತ್ತಿನಲ್ಲಿ ಮುಳುಗಿದ್ದರೂ ತನ್ನ ಬಗ್ಗೆ ಯೋಚಿಸದೆ ಗಂಡಂದಿರ ಶ್ರೇಯಸ್ಸಿಗಾಗಿಯೇ ದುಡಿಯುವಂತಹ ಇಂತಹ ಸ್ತ್ರೀಯನ್ನು ನಾನೆಲ್ಲೂ ಕಂಡಿಲ್ಲ –ಎಂದು ಉದ್ಗರಿಸುವಷ್ಟೂ ಕರ್ಣನ ಪ್ರಶಂಸೆಗೆ ಪಾತ್ರಳಾದವಳು ದ್ರೌಪದಿ ಎಂಬುದು ಉಲ್ಲೇಖಾರ್ಹ ಸಂಗತಿಯಾಗಿರುವಂತೆ, ತನ್ನ ಅತ್ತೆಯಾದ ಕುಂತಿಯಿಂದ ಬಾಯ್ತುಂಬ ಹೊಗಳಿಸಿಕೊಳ್ಳಲ್ಪಟ್ಟ ಆದರ್ಶ ಸೊಸೆ ದ್ರೌಪದಿ ಎಂಬುದು ಮತ್ತೊಂದು ಉಲ್ಲೇಖಾರ್ಹ ವಿಚಾರ.

ಸಾಮಾನ್ಯವಾಗಿ ಅತ್ತೆಯಂದಿರು ಎಷ್ಟೇ ಒಳ್ಳೆಯವರಾದರೂ ತಮ್ಮ ಸೊಸೆ ತುಂಬ ಒಳ್ಳೆಯವಳೆಂದಾದರೂ –ಸೊಸೆಯನ್ನು ದೂರದೆ ಇರಬಹುದೇ ವಿನಾ ಹೊಗಳುವುದೆಂದಿಲ್ಲ. ಅದೂ ಪರೋಕ್ಷದಲ್ಲಿ ಹೊಗಳಿದರೂ ಸೊಸೆಯ ಸಮಕ್ಷಮದಲ್ಲೇ ಆಕೆಯನ್ನು ಹೊಗಳುವುದೆಂಬುದು ಇಲ್ಲವೇ ಇಲ್ಲ.

ಈ ಸಾಮಾನ್ಯ ನಿಯಮಕ್ಕೆ ಅಪವಾದ ಕುಂತೀದೇವಿ. ಪಾಂಡವರು ಅರಣ್ಯಕ್ಕೆ ತೆರಳುತ್ತಿದ್ದ ಹೃದಯದ್ರಾವಕ ಸನ್ನಿವೇಶದಲ್ಲಿ ಕುಂತೀದೇವಿ ದ್ರೌಪದಿಗೆ ನೀಡಿದ ಸಂದೇಶ ಕುಂತಿಗೆ ತನ್ನ ಸೊಸೆ ದ್ರೌಪದಿಯ ಪಾತಿವ್ರತ್ಯಾಚರಣೆಯ ವಿಷಯದಲ್ಲಿ ಎಷ್ಟೊಂದು ವಿಶ್ವಾಸ ಇತ್ತೆಂಬುದರ ಬಗ್ಗೆ ಬೆಳಕುಚೆಲ್ಲಬಲ್ಲದು.

ಅತ್ತೆ ಕುಂತಿಗೆ ನಮಸ್ಕರಿಸಿ, ಅರಣ್ಯಕ್ಕೆ ತೆರಳಲು ಅನುಮತಿ ಕೇಳಿದ ದ್ರೌಪದಿಗೆ ಕುಂತಿ ನೀಡಿದ ಸಂದೇಶ–

'ಮಗಳೇ, ನೀನು ಸ್ತ್ರೀಧರ್ಮಗಳನ್ನೆಲ್ಲ ಚೆನ್ನಾಗಿ ಬಲ್ಲವಳು; ಶೀಲ ಹಾಗೂ

14. [ಆದಿಪರ್ವ 186-23]

ಸದಾಚಾರಸಂಪನ್ನಳು. ಆದುದರಿಂದ ಇಂತಹ ವ್ಯಸನ ಬಂದಾಗ ನಿನ್ನಂತಹವಳು ಶೋಕವನ್ನು ಮಾಡಬಾರದು. ಪತಿವ್ರತಾಸ್ತ್ರೀಯರ ಗುಣಗಳಿಂದ ಸಂಪನ್ನಳಾದ, ತಂದೆಯ ಹಾಗೂ ಮಾವನ ಎರಡು ಕುಲಗಳನ್ನೂ ಅಲಂಕರಿಸಿರುವ ನಿನಗೆ ಗಂಡಂದಿರ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂದು ಸಂದೇಶ ನೀಡಲು ನಾನು ಅರ್ಹಳಲ್ಲ. ನಿನ್ನ ಕ್ರೋಧಾಗ್ನಿಯಿಂದ ದಗ್ಧರಾಗದ ಕೌರವರು ಭಾಗ್ಯ ಶಾಲಿಗಳು. ಶ್ರೇಷ್ಠಧರ್ಮದಿಂದ ಸುರಕ್ಷಿತಳಾದ ನೀನು ಆದಷ್ಟು ಬೇಗ ಶ್ರೇಯಸ್ಸನ್ನು ಹೊಂದುವಿ"[15]

## ಜಗನ್ಮಾತೆಯ ಪ್ರಶಸ್ತಿ:

ಹೀಗೆ ದ್ರೌಪದಿಯ ಪಾತಿವ್ರತ್ಯ, ಧಾರ್ಮಿಕತೆ ಶತ್ರುಸ್ಥಾನದಲ್ಲಿದ್ದ ಕರ್ಣನ ಪ್ರಶಂಸೆಗೂ ಅತ್ತೆ ಕುಂತಿಯ ಹೊಗಳಿಕೆಗೂ ಪಾತ್ರವಾದದ್ದೆಂಬುದಕ್ಕಿಂತಲೂ ಪಾತಿವ್ರತ್ಯವನ್ನು ಪೂರ್ಣ ಪ್ರಮಾಣದಲ್ಲಿ ಅಳವಡಿಸಿಕೊಂಡು ಶ್ರೀಕೃಷ್ಣನ ಪೂರ್ಣಾನುಗ್ರಹಕ್ಕೆ ಪಾತ್ರಳಾಗಿದ್ದ ಜಗನ್ಮಾತೆ ಸತ್ಯಭಾಮೆಯ ಹೃತ್ಪೂರ್ವಕ ಪ್ರಶಸ್ತಿಗೂ ಪಾತ್ರವಾದದ್ದೆಂಬುದು ತುಂಬ ಗಮನಾರ್ಹ ಸಂಗತಿ.

## ಸತ್ಯಭಾಮೆಯ ಪ್ರಸ್ತಾವ:

ಪಾಂಡವರ ವನವಾಸದ ಸಂದರ್ಭದಲ್ಲಿ ಒಮ್ಮೆ ಪಾಂಡವರಲ್ಲಿಗೆ ಕೃಷ್ಣನ ಜೊತೆಗೆ ಸತ್ಯಭಾಮೆಯೂ ಹೋಗಿದ್ದಳು. ಕೃಷ್ಣ ಪಾಂಡವರ ಜೊತೆಗೆ ಸಂಭಾಷಣೆ ನಡೆಸುತ್ತಿದ್ದಾಗ ಸತ್ಯಭಾಮೆ ಮತ್ತು ದ್ರೌಪದಿ ಸಂವಾದ ನಡೆಸುತ್ತಿದ್ದರು. ಸತ್ಯಭಾಮೆ ಲಕ್ಷ್ಮೀದೇವಿಯ ಸಾಕ್ಷಾದವತಾರ. ಎಲ್ಲವನ್ನೂ ಬಲ್ಲವಳು. ಆದರೂ ಪತಿಯನ್ನು ವಶದಲ್ಲಿಟ್ಟುಕೊಳ್ಳುವ ಪಾತಿವ್ರತ್ಯದ ರಹಸ್ಯವನ್ನೂ ಆದನ್ನು ಅಳವಡಿಸಿಕೊಂಡು ಆದರ್ಶ ಪತಿವ್ರತೆಯಾಗಿ ಮೆರೆದ

---

15. ವತ್ಸೇ ಶೋಕೋ ನ ತೇ ಕಾರ್ಯಃ ಪ್ರಾಪ್ಯೇದಂ ವ್ಯಸನಂ ಮಹತ್ ।
ಸ್ತ್ರೀಧರ್ಮಾಣಾಮಭಿಜ್ಞಾಸಿ ಶೀಲಾಚಾರವತೀ ತಥಾ ॥
ನ ತ್ವಾಂ ಸಂದೇಷ್ಟುಮರ್ಹಾಮಿ ಭರ್ತೃನ್ ಪ್ರತಿ ಶುಚಿಸ್ಮಿತೇ ।
ಸಾಧ್ವೀಂ ಗುಣಸಮಾಪನ್ನಾ ಭೂಷಿತಂ ತೇ ಕುಲದ್ವಯಮ್ ॥
ಸಭಾಗ್ಯಾಃ ಕುರವಶ್ಚೇಮೇ ಯೇ ನ ದಗ್ಧಾಸ್ತ್ವಯಾನಘೇ...
....ಗುರುಧರ್ಮಾಭಿಗುಪ್ತಾ ಚ ಶ್ರೇಯಃ ಕ್ಷಿಪ್ರಮವಾಪ್ಸ್ಯಸಿ ॥
– [ಸಭಾ. 79-4......7]

ದ್ರೌಪದಿಯ ಆ ನಿಟ್ಟಿನ ನಡವಳಿಕೆಯನ್ನೂ ತಿಳಿಯದವಳಂತೆ ವಿಡಂಬಿಸುವಳು. ದ್ರೌಪದಿಯ ಮೂಲಕ ಪಾತಿವ್ರತ್ಯಧರ್ಮದ ಬೆಳಕನ್ನು ಪಸರಿಸಿ, ಆ ಪ್ರಯುಕ್ತ ಆಕೆಗೆ ಪುಣ್ಯವೂ ಕೀರ್ತಿಯೂ ದೊರಕುವಂತೆ ಅನುಗ್ರಹಿಸುವುದಕ್ಕಾಗಿಯೇ ಹಾಗೆ ವಿಡಂಬಿಸಿರುವಳು.[16]

'ಪತಿಯನ್ನು ಪಾತಿವ್ರತ್ಯದಿಂದ ಒಲಿಸಿಕೊಳ್ಳಬೇಕೇ ಹೊರತು ಮದ್ದು-ಮಾಟ-ಮಂತ್ರಗಳಿಂದ ತನ್ನ ಮುಷ್ಠಿಯೊಳಗೆ ಇಟ್ಟುಕೊಳ್ಳುವುದಲ್ಲ' -ಎಂಬ ಸಿದ್ಧಾಂತವನ್ನು ದ್ರೌಪದಿಯ ಮುಖದಿಂದ ಹೊರಹೊಮ್ಮಿಸುವುದಕ್ಕಾಗಿ ಸತ್ಯಭಾಮೆ ಪೂರ್ವಪಕ್ಷದ ರೂಪದಲ್ಲಿ ಸ್ನಾನ, ಮಂತ್ರ, ಔಷಧ -ಇತ್ಯಾದಿಗಳಿಂದಾಗಿ ಪತಿಯಂದಿರನ್ನು ವಶದಲ್ಲಿಟ್ಟುಕೊಂಡಿರುವಿಯೋ! ಎಂದೇ ಸಂವಾದವನ್ನು ಪ್ರಾರಂಭಿಸುವಳು.

ಸತ್ಯಭಾಮೆಯ ಆ ಬಗೆಯ ಪ್ರಸ್ತಾವನಾರೂಪದ ಮಾತು ಹೀಗಿದೆ-

ನಿನ್ನ ಪತಿಯಂದಿರು ನಿನಗೆ ವಶರಾಗಿ, ನಿನ್ನ ಬಗ್ಗೆ ಎಂದೂ ಕ್ರುದ್ಧರಾಗುವುದಿಲ್ಲ.[17] ಯಾವುದೇ ಸಮಸ್ಯೆ ಬಂದರೂ ನಿನ್ನ ಮುಖ ಕಂಡು ಸಮಸ್ಯೆಗೆ ಪರಿಹಾರವನ್ನು ಹುಡುಕಲು ಯತ್ನಿಸುವರು.[18] ಹೀಗೆ ಪತಿಯಂದಿರು ನಿನ್ನ ವಶದಲ್ಲಿ ಇರಲು ಯಾವ ಉಪಾಯವನ್ನು ಅಳವಡಿಸಿಕೊಂಡಿರುವಿ? ವ್ರತಾನುಷ್ಠಾನ, ತಪಸ್ಸು, ಸ್ನಾನ, ಮಂತ್ರ, ಔಷಧ, ಜಪ, ಹೋಮ -ಇತ್ಯಾದಿಗಳಲ್ಲಿ ಯಾವುದಾದರೊಂದು ಉಪಾಯವನ್ನು ಅಳವಡಿಸಿಕೊಂಡು ಗಂಡಂದಿರನ್ನು ನಿನ್ನ ವಶದಲ್ಲಿಟ್ಟುಕೊಂಡಿರುವಿಯಾ? ನೀನು ಅಳವಡಿಸಿಕೊಂಡ ಉಪಾಯವನ್ನು ನಾನೂ ಅಳವಡಿಸಿಕೊಂಡು ನನ್ನ ಪತಿ ಶ್ರೀಕೃಷ್ಣ ನಿತ್ಯ ನನ್ನ ವಶದಲ್ಲಿರುವಂತೆ ಮಾಡಿಕೊಳ್ಳಬೇಕಾಗಿದೆ.[19]

---

16. ಪರೀಕ್ಷಂತ್ಯಾ ಸತ್ಯಯಾ ಸರ್ವವೇತ್ತ್ರ್ಯಾ
ನಿರ್ದೋಷಯಾ ಚೋದಿತಾ ಪ್ರಾಹ ಕೃಷ್ಣಾ । - [ಮ.ಭಾರ.ತಾ.ನಿ. 22-383]

17. ಕಥಂ ಚ ವಶಗಾಸ್ತುಭ್ಯಂ ನ ಕುಪ್ಯಂತಿ ಚ ತೇ ಶುಭೇ । - [ವನಪರ್ವ 233-5]

18. ತವ ವಶ್ಯಾ ಹಿ ಸತತಂ ಪಾಂಡವಾಃ ಪ್ರಿಯದರ್ಶನೇ ।
ಮುಖಪ್ರೇಕ್ಷಾಶ್ಚ ತೇ ಸರ್ವೇ..... - [233-6]

19. ವ್ರತಚರ್ಯಾ ತಪೋ ವಾಪಿ ಸ್ನಾನಮಂತ್ರೌಷಧಾನಿ ಚ ।

## ನಿರ್ದಾಕ್ಷಿಣ್ಯದ ನಿರಾಕರಣೆ:

ಹೀಗೆ ದ್ರೌಪದಿಯ ಮುಖದಿಂದ ಪಾತಿವ್ರತ್ಯದ ಹಿರಿಮೆಗರಿಮೆಗಳನ್ನು ಪ್ರಚುರಪಡಿಸುವ ಉದ್ದೇಶದಿಂದ ಹಾಗೂ ಗಂಡನನ್ನು ಪಾತಿವ್ರತ್ಯದಿಂದ ಒಲಿಸಿಕೊಳ್ಳಬೇಕೇ ಹೊರತು ಬೇರೆ ಉಪಾಯಗಳಿಂದ ವಶೀಕರಿಸಿಕೊಳ್ಳುವ ವಿಚಾರವನ್ನೇ ಮಾಡಬಾರದೆಂದು ದಾರ್ಢ್ಯಪೂರ್ವಕವಾಗಿ ಉದ್ಘೋಷಿಸುವಂತಾಗಬೇಕೆಂಬ ಉದ್ದೇಶದಿಂದ ಸತ್ಯಭಾಮೆ ಮಾಡಿರುವ ಈ ಪ್ರಸ್ತಾವವನ್ನು ತೀವ್ರವಾಗಿ, ನಿರ್ದಾಕ್ಷಿಣ್ಯವಾಗಿ ನಿರಾಕರಿಸುವಳು ದ್ರೌಪದಿ. ಇದರಿಂದಾಗಿ ಪಾತಿವ್ರತ್ಯಕ್ಕೆ ಸಂಬಂಧಿಸಿರುವ ಪತಿಯನ್ನು ಒಲಿಸಿಕೊಳ್ಳುವ ಪದ್ಧತಿಯಲ್ಲಿ ಆಕೆಗೆ ಇರುವ ನಿಷ್ಠೆ ಎದ್ದುಕಾಣುವುದು. ಸತ್ಯಭಾಮೆಗೆ ಬೇಸರ ಆದೀತೆಂದು ಸ್ವಲ್ಪವೂ ಸಂಕೋಚಕ್ಕೊಳಗಾಗದೆ ಅವಳ ವಿಚಾರಣೆಯನ್ನು ತೀವ್ರವಾಗಿ ಖಂಡಿಸುತ್ತ ದ್ರೌಪದಿ ಗುಡುಗಿದ ಮಾತುಗಳು ಇವು –'ಸತ್ಯಭಾಮೆ, ನೀನು ಕೆಟ್ಟಸ್ತ್ರೀಯರ ಆಚರಣೆಯನ್ನು ವಿಚಾರಿಸುತ್ತಿರುವಿ. ಕೆಟ್ಟಸ್ತ್ರೀಯರು ತುಳಿದ ಮಾರ್ಗದಲ್ಲಿ ನಮ್ಮ ವಿಚಾರಣೆ ಹೇಗೆ ತಾನೇ ಕೂಡುವುದು? ನೀನು ತುಂಬ ಬುದ್ಧವಂತೆ. ಶ್ರೀಕೃಷ್ಣನಿಗೆ ಅತ್ಯಂತ ಪ್ರಿಯಳಾದ ಪಟ್ಟದ ರಾಣಿ. ಇಂತಹ ನಿನ್ನಲ್ಲಿ ಈ ಬಗೆಯ ಪ್ರಶ್ನೆಯಾಗಲೀ ಸಂದೇಹವಾಗಲೀ ಖಂಡಿತಾ ಕೂಡುವುದಿಲ್ಲ.[20]

ದ್ರೌಪದಿಗೆ ಸತ್ಯಭಾಮೆ ನಿರ್ದುಷ್ಟಳೆಂದೂ ವಿಡಂಬನೆಗಾಗಿಯಷ್ಟೇ ಹೀಗೆ ವಿಚಾರಿಸಿರುವಳೆಂದೂ ಚೆನ್ನಾಗಿ ಗೊತ್ತು. ಆದರೂ ಲೋಕಶಿಕ್ಷಣೆಗಾಗಿ ಹೀಗೆ ಹೇಳುವಳು.[21]

---

ವಿದ್ಯಾವೀರ್ಯಂ ಮೂಲವೀರ್ಯಂ ಜಪಹೋಮಾಗದಾಸ್ತಥಾ ॥
.....ಯೇನ ಕೃಷ್ಣೇ ಭವೇನ್ನಿತ್ಯಂ ಮಮ ಕೃಷ್ಣೋ ವಶಾನುಗಃ ॥ – [233-7,8]

20. ಅಸತ್ಸ್ತ್ರೀಣಾಂ ಸಮಾಚಾರಂ ಸತ್ಯೇ ಮಾಮನುಪೃಚ್ಛಸಿ ।
ಅಸದಾಚರಿತೇ ಮಾರ್ಗೇ ಕಥಂ ಸ್ಯಾದನುಕೀರ್ತನಮ್ ॥
ಅನುಪ್ರಶ್ನಃ ಸಂಶಯೋ ವಾ ನೈತತ್ ತ್ವಯ್ಯುಪಪದ್ಯತೇ ।
ತಥಾ ಹ್ಯುಪೇತಾ ಬುದ್ಧ್ಯಾ ತ್ವಂ ಕೃಷ್ಣಸ್ಯ ಮಹಿಷೀ ಪ್ರಿಯಾ ॥ – [233-10,11]

21. .....ಸತ್ಯಾಂ ನಿರ್ದೋಷಸಂವಿದಮ್ ।
ಜ್ಞಾತ್ವಾಪಿ ಕೃಷ್ಣಾ ಪ್ರೋವಾಚ ಲೋಕಶಿಕ್ಷಾರ್ಥಮೇವ ತು ॥
– [ಮ.ಭಾರ.ತಾ.ನಿ. 22-384]

ಹೀಗೆ ಸತ್ಯಭಾಮೆ ಪಾತಿವ್ರತ್ಯದ ಕುರಿತು ಪ್ರಸ್ತಾವನೆ ನಡೆಸಿದ್ದೇ ಸರಿಯಲ್ಲ –ಎಂದು ಪ್ರತಿಪಾದಿಸುತ್ತ ದ್ರೌಪದಿ ಮೊತ್ತಮೊದಲು ಉದ್ಘೋಷಿಸುವ ಪಾತಿವ್ರತ್ಯದ ಮಹತ್ತ್ವದ ನಿಯಮ –ಪತ್ನಿಯಾದವಳು ಪತಿಗೆ ಅಪ್ರಿಯವಾಗುವುದನ್ನು ಏನನ್ನೂ ಎಂದೂ ಮಾಡಬಾರದು.[22] ಮಂತ್ರ, ಮದ್ದು, ಮಾಟಗಳಿಂದ ಪತಿಯನ್ನು ವಶಪಡಿಸಿಕೊಳ್ಳಲು ತೊಡಗಿ ಅವನು ಆ ಪ್ರಯುಕ್ತ ಜಲೋದರ ಮುಂತಾದ ರೋಗಗ್ರಸ್ತನಾಗುವಂತೆ, ಇಂದ್ರಿಯಗಳ ಶಕ್ತಿಯನ್ನು ಕಳೆದು ಕೊಳ್ಳುವಂತೆ ಮಾಡಬಾರದು.[23]

ಹೀಗೆ ಸತ್ಯಭಾಮೆ ಪತಿಯನ್ನು ವಶಪಡಿಸಿಕೊಳ್ಳಲು ಕೆಟ್ಟ ಸ್ತ್ರೀಯರ ನಡತೆಯನ್ನು ಪ್ರಸ್ತಾವಿಸಿದ್ದು, ವಿನೋದಕ್ಕಾಗಿ ಎಂದು ಬಲ್ಲ ದ್ರೌಪದಿ ಅವಳ ಪ್ರೀತಿಗಾಗಿಯೇ ಅದಕ್ಕನುಗುಣವಾಗಿಯೇ ನಿರಾಕರಿಸುವಳು.[24]

ಆ ಮೂಲಕ ಆ ರೀತಿಯಾಗಿ ಪತಿಯನ್ನು ವಶದಲ್ಲಿಟ್ಟುಕೊಳ್ಳುವುದು ಸರಿಯಲ್ಲ ಎಂದು ಸಾರಿ, ಪಾತಿವ್ರತ್ಯದ ಅನುಷ್ಠಾನದಿಂದ ಪತಿಯನ್ನು ಒಲಿಸಿ ಕೊಳ್ಳಬೇಕು ಎಂಬ ಅಭಿಪ್ರಾಯದಿಂದ ತಾನು ಹೇಗೆ ಅಂತಹ ಪಾತಿವ್ರತ್ಯದಿಂದ ಗಂಡಂದಿರನ್ನು ಒಲಿಸಿಕೊಳ್ಳುವಲ್ಲಿ ಯಶಸ್ವಿಯಾಗಿರುವಳೆಂದು ತೋರಿಸಿಕೊಡುವುದಕ್ಕಾಗಿ ತಾನು ಅಳವಡಿಸಿಕೊಂಡಿರುವ ಪಾತಿವ್ರತ್ಯಕ್ಕೆ ಸಂಬಂಧಿಸುವ ವಿಧಿನಿಷೇಧಗಳನ್ನೆಲ್ಲ ವಿಸ್ತಾರವಾಗಿ ಪ್ರಸ್ತುತಪಡಿಸುವಳು–

ಮಹಾತ್ಮರಾದ ಪಾಂಡವರ ವಿಷಯದಲ್ಲಿ ನಾನು ಯಾವ ನಡತೆಯನ್ನು ಅಳವಡಿಸಿಕೊಂಡಿರುವೆನೆಂದು ತಿಳಿಸುವೆನು.[25]

---

22. ನ ಜಾತು ವಿಪ್ರಿಯಂ ಭರ್ತುಃ ಸ್ತ್ರಿಯಾ ಕಾರ್ಯಂ ಕಥಂಚನ । – [233-17]

23. ಜಲೋದರಸಮಾಯುಕ್ತಾಃ ಶ್ವಿತ್ರಿಣಃ ಪಲಿತಾಸ್ತಥಾ ।
ಅಪುಮಾಂಸಃ ಕೃತಾಃ ಸ್ತ್ರೀಭಿರ್ಜಡಾಂಧಬಧಿರಾಸ್ತಥಾ ॥ – [233-10]

24. ಕ್ರೀಡಾರ್ಥಮೇವ ವಚನಂ ಜ್ಞಾತ್ವಾ ಸತ್ಯಾಸಮೀರಿತಮ್ ।
ತಸ್ಯಾನುಸಾರಿವಾಕ್ಯಾನಿ ತತ್ಪ್ರೀತ್ಯಾ ಏವ ಚಾಬ್ರವೀತ್ ॥
– [ಮ.ಭಾರ.ತಾ.ನಿ. 22-385]

25. ವರ್ತಾಮ್ಯಹಂ ತು ಯಾಂ ವೃತ್ತಿಂ ಪಾಂಡವೇಷು ಮಹಾತ್ಮಸು ।
ತಾಂ ಸರ್ವಾಂ ಶೃಣು ಮೇ ಸತ್ಯಾಂ ಸತ್ಯಭಾಮೇ ಯಶಸ್ವಿನಿ ॥
– [ವನಪರ್ವ 233-18]

[ಪಾತಿವ್ರತ್ಯಧರ್ಮದ ಕೇಂದ್ರಬಿಂದು ಪತಿಸೇವೆ. ಅಂತಹ ಪತಿಸೇವೆಗೆ ಸಂಬಂಧಿಸುವಂತೆ ಕೆಲವು ವಿಧಿಗಳೂ ನಿಷೇಧಗಳೂ ಪಾತಿವ್ರತ್ಯದ ವ್ಯಾಪ್ತಿಯಲ್ಲಿ ಬರುವವು. ಹಾಗೆಯೇ ಗೃಹಕ್ಕೆ ಸಂಬಂಧಿಸುವ ಕರ್ತವ್ಯಗಳೂ, ಗೃಹದಲ್ಲಿಯ ಅತ್ತೆ, ಅತಿಥಿಗಳು ಹಾಗೂ ಸೇವಕರು –ಮುಂತಾದವರ ಬಗೆಗಿನ ನಡತೆಗಳೂ ಪತಿಸೇವೆಗೆ ಪೂರಕವಾಗಿ ಪಾತಿವ್ರತ್ಯದ ವ್ಯಾಪ್ತಿಯಲ್ಲಿ ಸೇರುವವು. ಇವನ್ನೆಲ್ಲ 'ಪತಿಸೇವೆ' 'ಗೃಹವ್ಯವಹಾರ' 'ಅತಿಥ್ಯಾದಿಗಳ ಶುಶ್ರೂಷೆ' –ಎಂಬ ಮೂರು ಶೀರ್ಷಿಕೆಗಳಡಿಯಲ್ಲಿ ಕ್ರೋಡೀಕರಿಸಿ ಪರಿಶೀಲಿಸೋಣ.]

# ಪತಿಸೇವೆ

## ಎಚ್ಚರದಿಂದ ಉಪಚರಿಸುವೆ:

ನಾನು ಅಹಂಕಾರ, ಕಾಮ ಹಾಗೂ ಕ್ರೋಧಗಳನ್ನು ಬಿಟ್ಟು ಯಾವಾಗಲೂ ತುಂಬ ಎಚ್ಚರದಿಂದ ಪತ್ನೀ ಸಹಿತರಾದ ಪಾಂಡವರನ್ನು ಉಪಚರಿಸುವೆನು.[26] ನನ್ನ ಬೇಕು ಬೇಡಗಳನ್ನೆಲ್ಲ ದೂರವಿರಿಸಿ, ಕಿಂಚಿತ್ತೂ ಅಹಂಕಾರ, ದುರಭಿಮಾನಿಗಳಿಗೊಳಗಾಗದೆ ಮನಸ್ಸನ್ನು ಪೂರ್ಣವಾಗಿ ನನ್ನ ಹಿಡಿತದಲ್ಲಿಟ್ಟು ಕೊಂಡು ಪತಿಯರ ಶುಶ್ರೂಷೆಯನ್ನು ನಡೆಸುವೆನು.[27] ನನ್ನ ಬಾಯಿಯಿಂದ ಎಂದೂ ಕೆಟ್ಟ ಮಾತು ಹೊರಹೊಮ್ಮದಂತೆ, ಎಚ್ಚರದಿಂದಿರುವೆ. ಕೆಟ್ಟ ರೀತಿಯಿಂದ ಎಂದೂ ಎಲ್ಲೂ ನಿಲ್ಲುವುದಿಲ್ಲ. ನಾಚಿಗೆಗೆಟ್ಟವಳಂತೆ ದೃಷ್ಟಿ ಹಾಯಿಸುವುದಿಲ್ಲ. ಕೆಟ್ಟ ಸ್ಥಳದಲ್ಲಿ ಕುಳಿತುಕೊಳ್ಳುವುದಿಲ್ಲ. ಕೆಟ್ಟ ರೀತಿಯಲ್ಲಿ ಹೆಜ್ಜೆ ಹಾಕುವುದಿಲ್ಲ. ಪತಿಯಂದಿರ ಆಶಯವನ್ನಾಗಲೀ ನಿರ್ಧಾರವನ್ನಾಗಲೀ ಮೀರದಂತೆ ಎಚ್ಚರದಿಂದ ನಡೆದುಕೊಳ್ಳುವೆ. ಹೀಗೆ ಪತಿಯಂದಿರ ಚಿತ್ತಕ್ಕನುಗುಣವಾಗಿಯೇ

---

26. ಅಹಂಕಾರಂ ವಿಹಾಯಾಹಂ ಕಾಮಕ್ರೋಧೌ ಚ ಸರ್ವದಾ ।
ಸದಾರಾನ್ ಪಾಂಡವಾನ್ ನಿತ್ಯಂ ಪ್ರಯತೋಪಚರಾಮ್ಯಹಮ್ ॥
– [ವನಪರ್ವ 233-19]

27. ಪ್ರಣಯಂ ಪ್ರತಿಸಂಹೃತ್ಯ ನಿಧಾಯಾತ್ಮಾನಮಾತ್ಮನಿ ।
ಶುಶ್ರೂಷುರ್ನಿರಹಂಮಾನಾ ಪತೀನಾಂ ಚಿತ್ತರಕ್ಷಣೆ ॥ – [233-20]

ವರ್ತಿಸುವೆನು.[28] ಮೃದು ಸ್ವಭಾವದ, ಸತ್ಯಧರ್ಮ ಪಾಲಕರಾದ ಪತಿಯಂದಿರು ಹಾವುಗಳಂತೆ ಕ್ರುದ್ಧರಾದರೂ ಅವರನ್ನು ಪರಿಚರಿಸುವೆ.[29]

## ಪತಿಯನ್ನು ಅವಲಂಬಿಸಿಕೊಂಡಿರುವುದೇ ಧರ್ಮ:

ಪತಿಯನ್ನು ಆಶ್ರಯಿಸಿಕೊಂಡಿರುವುದೇ ಸ್ತ್ರೀಯರ ಸನಾತನಧರ್ಮ ಎಂಬುದು ನನ್ನ ಆಶಯ. ಅವರ ಪಾಲಿಗೆ ಅವನೇ ದೇವನ ಪ್ರತಿಮೆ. ಅವನೇ ಮುಖ್ಯ ಆಸರೆ.[30] ಅಂತಹ ಪತಿಗೆ ಯಾವ ಹೆಣ್ಣು ತಾನೇ ಅಪ್ರಿಯವಾಗಿ ನಡೆದುಕೊಂಡಾಳು? ನನ್ನ ಗಂಡಂದಿರಿಗಿಂತ ಬೇರೆಯಾದ ದೇವತೆಯಾಗಲೀ ಮನುಷ್ಯನಾಗಲೀ ಗಂಧರ್ವನಾಗಲೀ ಯುವಕನಾಗಲೀ ತುಂಬ ಅಲಂಕರಿಸಿಕೊಂಡವನಾಗಲೀ ಧನಿಕನಾಗಲೀ ಅಥವಾ ಸುಂದರನಾಗಲೀ –ನನಗೆ ಅಭಿಮತನಾಗುವುದಿಲ್ಲ.[31] ಗಂಡಂದಿರು ಭೋಜನ ಮಾಡದೆ ನಾನು ಊಟ ಮಾಡುವುದಿಲ್ಲ. ಹಾಗೆಯೇ ಅವರು ಮೀಯದೆ ನಾನು ಸ್ನಾನ ಮಾಡುವುದಿಲ್ಲ. ಅವರು ಮಲಗದೆ ನಾನು ಮಲಗುವುದಿಲ್ಲ.[32] ಗದ್ದೆಯಿಂದ, ಅರಣ್ಯದಿಂದ ಅಥವಾ ಗ್ರಾಮದಿಂದ ಮನೆಗೆ ಪತಿ ಬಂದಾಗ ಎದ್ದುನಿಂತು ಅಭಿನಂದಿಸುವೆನು ಹಾಗೂ ಕುಳಿತುಕೊಳ್ಳಲು ಆಸನವನ್ನು ಕಲ್ಪಿಸುವ ಮೂಲಕವೂ[33] ಕುಡಿಯಲು ನೀರು ಕೊಡುವ ಮೂಲಕವೂ ಗೌರವಿಸುವೆನು. ಪತಿ ಯಾವುದನ್ನು

---

28. ದುರ್ವ್ಯಾಹೃತಾಚ್ಛಂಕಮಾನಾ ದುಃಸ್ಥಿತಾದ್ ದುರವೇಕ್ಷಿತಾತ್ ।
ದುರಾಸಿತಾದ್ ದುರ್ವ್ರಜಿತಾದಿಂಗಿತಾಧ್ಯಸಿತಾದಪಿ ॥ – [233-21]

29. ಮೃದೂನ್ ಸತಃ ಸತ್ಯಶೀಲಾನ್ ಸತ್ಯಧರ್ಮಾನುಪಾಲಿನಃ ।
ಆಶೀವಿಷಾನಿವ ಕ್ರುದ್ಧಾನ್ ಪತೀನ್ ಪರಿಚರಾಮ್ಯಹಮ್ ॥ – [233-36]

30. ಪತ್ಯಾಶ್ರಯೋ ಹಿ ಮೇ ಧರ್ಮೋ ಮತಃ ಸ್ತ್ರೀಣಾಂ ಸನಾತನಃ ।
ಸ ದೇವಃ ಸಾ ಗತಿರ್ನಾನ್ಯಾ ತಸ್ಯ ಕಾ ವಿಪ್ರಿಯಂ ಚರೇತ್ ॥ – 233-37]

31. ದೇವೋ ಮನುಷ್ಯೋ ಗಂಧರ್ವೋ ಯುವಾ ಚಾಪಿ ಸ್ವಲಂಕೃತಃ ।
ದ್ರವ್ಯವಾನಭಿರೂಪೋ ವಾ ನ ಮೇಽನ್ಯಃ ಪುರುಷೋ ಮತಃ ॥ – 233-23]

32. ನಾಭುಕ್ತವತಿ ನಾಸ್ನಾತೇ ನಾಸಂವಿಷ್ಟೇ ಚ ಭರ್ತರಿ ।
ನ ಸಂವಿಶಾಮಿ ನಾಶ್ನಾಮಿ ಸದಾ ಕರ್ಮಕರೇಷ್ವಪಿ ॥ – 233-24]

33. ಕ್ಷೇತ್ರಾದ್ ವನಾದ್ ವಾ ಗ್ರಾಮಾದ್ ವಾ ಭರ್ತಾರಂ ಗೃಹಮಾಗತಮ್ ।
ಅಭ್ಯುತ್ಥಾಯಾಭಿನಂದಾಮಿ ಆಸನೇನೋದಕೇನ ಚ ॥ – [233-25]

ಕುಡಿಯುವುದಿಲ್ಲವೋ ಯಾವುದನ್ನು ಸೇವಿಸುವುದಿಲ್ಲವೋ ಯಾವುದನ್ನು ತಿನ್ನುವುದಿಲ್ಲವೋ –ಅವೆಲ್ಲವನ್ನೂ ನಾನೂ ದೂರೀಕರಿಸುವೆನು.[34] ನಾನು ಪತಿಯಂದಿರನ್ನು ಅತಿಕ್ರಮಿಸಿ ಮಲಗುವುದಿಲ್ಲ; ತಿನ್ನುವುದಿಲ್ಲ. ಹಾಗೂ ಅಲಂಕರಿಸಿಕೊಳ್ಳುವುದಿಲ್ಲ.[35] ಗಂಡ ಇಲ್ಲದ ಯಾವ ಜಾಗದಲ್ಲೂ ಒಬ್ಬಂಟಿಗಳಾಗಿ ನಾನು ಎಂದೂ ಇರಬಯಸುವುದಿಲ್ಲ. ಗಂಡ ಕುಟುಂಬ ಪೋಷಣೆಗಾಗಿ ಪರವೂರಿಗೆ ತೆರಳಿದಾಗ ನಾನು ಬ್ರಹ್ಮಚರ್ಯ ವ್ರತನಿಷ್ಠಳಾಗಿ ಪುಷ್ಪ, ಬಣ್ಣ –ಇತ್ಯಾದಿಗಳ ಅಲಂಕಾರವನ್ನು ಮಾಡಿಕೊಳ್ಳುವುದಿಲ್ಲ.[36]

# ಗೃಹವ್ಯವಹಾರ

## ಮನೆಯ ಕೃತ್ಯ, ಶುದ್ಧಿ ಹಾಗೂ ಶಿಸ್ತು:

[37]ಮನೆಯಲ್ಲಿ ರುಚಿಯಾದ ಶುಚಿಯಾದ ಅಡುಗೆ ಮಾಡುವೆ. ಮನೆಯನ್ನು ಯಾವಾಗಲೂ ಸ್ವಚ್ಛವಾಗಿ, ಪವಿತ್ರವಾಗಿ ಇಟ್ಟುಕೊಳ್ಳುವೆನು. ಮನೆಯ ಪಾತ್ರೆ ಪಗಡೆಗಳನ್ನು ನಿರ್ಮಲವಾಗಿ ಇಟ್ಟುಕೊಳ್ಳುವೆನು. ಸಕಾಲದಲ್ಲಿ ಭೋಜನವನ್ನು ನೀಡುವೆನು. ಮನಸ್ಸಿನಲ್ಲೂ ಇಂದ್ರಿಯಗಳಲ್ಲೂ ನಿಯಂತ್ರಣವನ್ನು ಅಳವಡಿಸಿಕೊಂಡು ನಡೆದುಕೊಳ್ಳುವೆನು. ಮನೆಯಲ್ಲಿ ರಹಸ್ಯವಾಗಿ ಧಾನ್ಯಗಳನ್ನು ಸಂಗ್ರಹಿಸಿಡುವೆನು. ಧರ್ಮರಾಜನ ಹಾಗೂ ಉಳಿದ ಪಾಂಡವರ ಆಯ, ವ್ಯಯ

---

34. ಯಚ್ಚ ಭರ್ತಾ ನ ಪಿಬತಿ ಯಚ್ಚ ಭರ್ತಾ ನ ಸೇವತೇ ।
ಯಚ್ಚ ನಾಶ್ನಾತಿ ಮೇ ಭರ್ತಾ ಸರ್ವಂ ತದ್ ವರ್ಜಯಾಮ್ಯಹಮ್ ॥
– [233-31]

35. ಅಹಂ ಪತೀನ್ ನಾತಿಶಯೇ ನಾತ್ಯಶ್ನೇ ನಾತಿಭೂಷಯೇ । – [233-38]

36. ಸರ್ವಥಾ ಭರ್ತೃರಹಿತಂ ನ ಮಮೇಷ್ಟಂ ಕಥಂಚನ ।
ಯದಾ ಪ್ರವಸತೇ ಭರ್ತಾ ಕುಟುಂಬಾರ್ಥೇನ ಕೇನಚಿತ್ ।
ಸುಮನೋವರ್ಣಕಾಪೇತಾ ಭವಾಮಿ ವ್ರತಚಾರಿಣೀ ॥ – [233-31]

37. ಪ್ರಮೃಷ್ಟಭಾಂಡಾ ಮೃಷ್ಟಾನ್ನಾ ಕಾಲೇ ಭೋಜನದಾಯಿನೀ ।
ಸಂಯತಾ ಗುಪ್ತಧಾನ್ಯಾ ಚ ಸುಸಂಮೃಷ್ಟನಿವೇಶನಾ ॥ – [233-26]

ಹಾಗೂ ಉಳಿತಾಯ ಇವೆಲ್ಲವನ್ನೂ ನಾನೊಬ್ಬಳೇ ಬಲ್ಲವಳಾಗಿರುವೆನು.[38] ಗಂಡಂದಿರ ಸಂಪತ್ತಿನ ಕೋಶವನ್ನು ನಾನೊಬ್ಬಳೇ ಬಲ್ಲವಳು.[39]

## ವೈಯಕ್ತಿಕ ನಡತೆ:

ಶಾಸ್ತ್ರ ಉಪದೇಶಿಸಿದಂತೆ ನಿಯಮಪೂರ್ವಕ ಕರ್ತವ್ಯಗಳನ್ನೆಲ್ಲ ನಿರ್ವಹಿಸುತ್ತಿರುವ ನಾನು ನನ್ನನ್ನು ವಸ್ತ್ರಭೂಷಣಗಳಿಂದ ಅಲಂಕರಿಸಿಕೊಂಡಿರುವೆನು. ತುಂಬ ಎಚ್ಚರಿಕೆ ವಹಿಸಿ ಗಂಡಂದಿರಿಗೆ ಪ್ರಿಯವಾಗುವಂತೆಯೂ ಹಿತವಾಗುವಂತೆಯೂ ನಡೆದುಕೊಳ್ಳುವೆ.[40] ಯಾರ ಕಡೆಗಣನೆಗೂ ಗೋಚರವಾಗದ ಮಾತುಗಳನ್ನೇ ಆಡುವೆ. ಕೆಟ್ಟ ಸ್ತ್ರೀಯರ ಸಂಪರ್ಕವನ್ನೇ ಮಾಡುವುದಿಲ್ಲ. ಯಾವಾಗಲೂ ಸ್ವಲ್ಪವೂ ಆಲಸ್ಯಕ್ಕೆ ಒಳಗಾಗದೆ ಕ್ರಿಯಾಶೀಲಳಾಗಿರುವೆನು. ಗಂಡಂದಿರಿಗೆ ಅನುಕೂಲವಾಗಿಯೇ ನಡೆದುಕೊಳ್ಳುವೆನು.[41] ಗಂಡಂದಿರು ಮಾಡಿದ ಹಾಸ್ಯಕ್ಕಾಗಿ ನಗುವುದಲ್ಲದೆ ಬೇರೆ ಸಂದರ್ಭದಲ್ಲಿ ನಗುವುದಿಲ್ಲ. ಮನೆಯ ಬಾಗಿಲಿನಲ್ಲಿ ಮತ್ತೆ ಮತ್ತೆ ನಿಲ್ಲುವುದಿಲ್ಲ. ಕಸ ಹಾಕುವ ಸ್ಥಳದಲ್ಲಿ, ಮಹಡಿಯ ಮೇಲ್ಭಾಗದಲ್ಲಿ ತುಂಬ ಹೊತ್ತು ನಿಂತಿರುವುದಿಲ್ಲ.[42]

ಕೆಟ್ಟ ವ್ಯಕ್ತಿಗಳ ಜೊತೆಗೆ ಮಾತುಕತೆ ನಡೆಸುವುದಿಲ್ಲ. ಮನಸ್ಸಿನಲ್ಲಿ ಎಂದೂ ಅತೃಪ್ತಿಯನ್ನು ತಾಳುವುದಿಲ್ಲ. ಇನ್ನೊಬ್ಬರ ಚಟುವಟಿಕೆಗಳಿಗೆ ಸಂಬಂಧಿಸುವ ಮಾತುಕತೆಯನ್ನು ದೂರೀಕರಿಸುವೆನು. ಭಾರೀ ನಗು, ಅಧಿಕ ಕ್ರೋಧ –ಇವುಗಳನ್ನು ನಡೆಸುವುದಿಲ್ಲ. ಮತ್ತೊಬ್ಬರು ಕ್ರೋಧಗೊಳ್ಳಲು ಬೇಕಾದ

---

38. ಸರ್ವಂ ರಾಜ್ಞಃ ಸಮುದಯಮಾಯಂ ಚ ವ್ಯಯಮೇವ ಚ ।
ಏಕಾಹಂ ವೇದ್ಮಿ ಕಲ್ಯಾಣಿ ಪಾಂಡವಾನಾಂ ಯಶಸ್ವಿನೀ ॥ – [233-53]

39. ಏಕಾಹಂ ವೇದ್ಮಿ ಕೋಶಂ ವೈ ಪತೀನಾಂ ಧರ್ಮಚಾರಿಣಾಮ್ । – [233-56]

40. ಯಥೋಪದೇಶಂ ನಿಯತಾ ವರ್ತಮಾನಾ ವರಾಂಗನೇ ।
ಸ್ವಲಂಕೃತಾ ಸುಪ್ರಯತಾ ಭರ್ತುಃ ಪ್ರಿಯಹಿತೇ ರತಾ ॥ – [233-33]

41. ಅತಿರಸ್ಕೃತಸಂಭಾಷಾ ದುಃಸ್ತ್ರಿಯೋ ನಾನುಸೇವತೀ ।
ಅನುಕೂಲವತೀ ನಿತ್ಯಂ ಭವಾಮ್ಯನಲಸಾ ಸದಾ ॥ – [233-27]

42. ಅನರ್ಮ ಚಾಪಿ ಹಸಿತಂ ದ್ವಾರಸ್ಥಾನಮಭೀಕ್ಷ್ಣಶಃ ।
ಅವಸ್ಕರೇ ಚಿರಸ್ಥಾನಂ ನಿಷ್ಕುಟೇಷು ಚ ವರ್ಜಯೇ ॥ – [233-28]

ಅವಕಾಶವನ್ನೂ ನೀಡುವುದಿಲ್ಲ. ಯಾವಾಗಲೂ ಗಂಡಂದಿರ ಸೇವೆಯಲ್ಲೇ ಆಸಕ್ತಳಾಗಿರುವೆನು.[43] ಹಗಲೂ ರಾತ್ರಿಯಲ್ಲೂ ಹಸಿವು ನೀರಡಿಕೆಗಳನ್ನು ಸಹಿಸಿಕೊಂಡು ಗಂಡಂದಿರ ಆರಾಧನೆಯಲ್ಲೇ ತೊಡಗಿರುವ ನನ್ನ ಪಾಲಿಗೆ ಹಗಲೂ ರಾತ್ರಿಯೂ ಸಮಾನ.[44] ಬೆಳಗ್ಗೆ ಎಲ್ಲರಿಗಿಂತ ಮೊದಲು ಏಳುವೆನು. ರಾತ್ರಿ ಎಲ್ಲರಿಗಿಂತ ಕೊನೆಗೆ ಮಲಗುವೆನು.[45]

## ಮನೆಯಲ್ಲಿ ಧರ್ಮಾಚರಣೆ:

ಮನೆಯಲ್ಲಿ ಕುಟುಂಬದಲ್ಲಿ ಯಾವ ಯಾವ ಧರ್ಮವನ್ನು ನನ್ನ ಅತ್ತೆ ತಿಳಿಸಿರುವರೋ ಅವೆಲ್ಲವನ್ನೂ ಸ್ವಲ್ಪವೂ ಆಲಸ್ಯಕ್ಕೆ ಒಳಗಾಗದೆ ಕಾಲಕಾಲಕ್ಕೆ ನಡೆಸುತ್ತ ಬಂದಿರುವೆನು.[46]

ನಾನು ರಾತ್ರಿ ಹಗಲು ಆಲಸ್ಯವನ್ನು ತೋರದೆ ವಿನಯವನ್ನೂ ನಿಯಮಗಳನ್ನೂ ಪೂರ್ಣ ಪ್ರಮಾಣದಲ್ಲಿ ಅಳವಡಿಸಿಕೊಂಡು ಬಲಿ, ವೈಶ್ವದೇವಗಳ ವ್ಯವಸ್ಥೆ, ಶ್ರಾದ್ಧ, ಪರ್ವಕಾಲಗಳಲ್ಲಿ ಸ್ಥಾಲೀಪಾಕ, ಗೌರವಾರ್ಹ ವ್ಯಕ್ತಿಗಳ ಆದರಾತಿಥ್ಯ ಗೌರವಾರ್ಪಣೆ ಹಾಗೂ ನನಗೆ ತಿಳಿದ ಇತರ ಧರ್ಮಗಳು –ಇವೆಲ್ಲವನ್ನೂ ನಡೆಸುವೆನು.[47] ಕುಟುಂಬದ ಹೊಣೆಗಾರಿಕೆಯನ್ನೆಲ್ಲ ನನ್ನ ಮೇಲೆ ಹೊರಿಸಿ, ನನ್ನ ಗಂಡಂದಿರು ಉಪಾಸನೆಯಲ್ಲಿ ತೊಡಗುವರು.

---

43. ಅಂತ್ಯಾಲಾಪಮಸಂತೋಷಂ ಪರವ್ಯಾಪಾರಸಂಕಥಾಮ್ ।
ಅತಿಹಾಸಾತಿರೋಷೌ ಚ ಕ್ರೋಧಸ್ಥಾನಂ ಚ ವರ್ಜಯೇ ॥
ನಿರತಾಹಂ ಸದಾ ಸತ್ಯೇ ಭರ್ತೄಣಾಮುಪಸೇವನೇ ॥ – [233-29]

44. ಅನಿಶಾಯಾಂ ನಿಶಾಯಾಂ ಚ ಸಹಾ ಯಾ ಕ್ಷುತ್‌ಪಿಪಾಸಯೋಃ ।
ಆರಾಧಯಂತ್ಯಾ ಕೌರವ್ಯಾಂಸ್ತುಲ್ಯಾ ರಾತ್ರಿರಹಶ್ಚ ಮೇ ॥ – [233-57]

45. ಪ್ರಥಮಂ ಪ್ರತಿಬುಧ್ಯಾಮಿ ಚರಮಂ ಸಂವಿಶಾಮಿ ಚ । – [233-58]

46. ಯೇ ಚ ಧರ್ಮಾಃ ಕುಟುಂಬೇಷು ಶ್ವಶ್ವಾ ಚ ಕಥಿತಾಃ ಪುರಾ ।
ಅನುತಿಷ್ಠಾಮಿ ತತ್ ಸರ್ವಂ ನಿತ್ಯಕಾಲಮತಂದ್ರಿತಾ ॥ – [233-33]

47. ಭಿಕ್ಷಾಬಲಿಶ್ರಾದ್ಧಮಿತಿ ಸ್ಥಾಲೀಪಾಕಾಶ್ಚ ಸರ್ವಸು ।
ಮಾನ್ಯಾನಾಂ ಮಾನಸತ್ಕಾರಾ ಯೇ ಚಾನ್ಯೇ ವಿದಿತಾ ಮಮ ।
ತಾನ್ ಸರ್ವಾನನುವರ್ತೇಽಹಂ ದಿವಾರಾತ್ರಮತಂದ್ರಿತಾ ।
ವಿನಯಾನ್ ನಿಯಮಾಂಶ್ಚೈವ ಸದಾ ಸರ್ವಾತ್ಮನಾ ಶ್ರಿತಾ ॥ – [233-34, 35]

ಸಾಮಾನ್ಯರಿಗೆ ಹೊರಲು ಅಶಕ್ಯವಾದ ಆ ಭಾರವನ್ನು ನಾನು ನನ್ನೆಲ್ಲ ಸುಖವನ್ನು ದೂರಮಾಡಿ ರಾತ್ರಿಪಗಲು ಹೊರುವೆನು.[48]

# ಅತಿಥ್ಯಾದಿಗಳ ಶುಶ್ರೂಷೆ

## ಅತ್ತೆಯ ಸೇವೆ:

ನನ್ನ ಅತ್ತೆಯಾದ ಕುಂತಿಯನ್ನು ಪಾನವಸ್ತ್ರ, ಒಡವೆಗಳು ಹಾಗೂ ಭೋಜನ –ಇವುಗಳ ವಿಷಯದಲ್ಲಿ ಯಾವಾಗಲೂ ನಾನೇ ಪರಿಚರಿಸುವೆನು.[49] ವಸ್ತ್ರ, ಭೂಷಣ ಹಾಗೂ ಭೋಜನಗಳ ವಿಷಯದಲ್ಲಿ ನಾನು ಎಂದೂ ನನ್ನ ಅತ್ತೆಗಿಂತ ವಿಶೇಷವಾಗಿ ನಡೆದುಕೊಳ್ಳುವುದಿಲ್ಲ. ಕುಂತಿ ಪೃಥಿವಿಗೆ ಸಮಾನಳಾದವಳೆಂದು ಭಾವಿಸುವ ನಾನು ಎಂದೂ ಅವಳನ್ನು ನಿಂದಿಸುವುದಿಲ್ಲ.[50] ಯಾವಾಗಲೂ ನಿಯಂತ್ರಣವನ್ನು ಅಳವಡಿಸಿಕೊಂಡು ಅತ್ತೆಯ ನಿಂದೆ ನನ್ನಿಂದ ನಡೆಯದಂತೆ ಎಚ್ಚರ ವಹಿಸಿರುವೆನು.[51]

## ಬ್ರಾಹ್ಮಣ ಯತ್ಯಾದಿಗಳ ಪೂಜೆ ಪುರಸ್ಕಾರ:

ಯುಧಿಷ್ಠಿರನ ಮನೆಯಲ್ಲಿ ಪ್ರತಿನಿತ್ಯ ಮೊದಲು ಎಂಟುಸಾವಿರ ಬ್ರಾಹ್ಮಣರು ಚಿನ್ನದ ತಟ್ಟೆಗಳಲ್ಲಿ ಭೋಜನವನ್ನು ಸ್ವೀಕರಿಸುತ್ತಿದ್ದರು. ಎಂಬತ್ತೆಂಟುಸಾವಿರ ಗೃಹಸ್ಥರನ್ನೂ ಅವರಲ್ಲಿ ಪ್ರತಿಯೊಬ್ಬರಿಗೂ ಮೂವತ್ತು ದಾಸಿಯರನ್ನೂ ಪಾಲನೆ ಪೋಷಣೆ ನಡೆಸಲಾಗುತ್ತಿತ್ತು. ಹತ್ತುಸಾವಿರ ಯತಿಗಳಿಗೆ ಚಿನ್ನದ ಪಾತ್ರೆಗಳಲ್ಲಿ

---

48. ಮಯಿ ಸರ್ವಂ ಸಮಾಸಜ್ಯ ಕುಟುಂಬಂ ಭರತರ್ಷಭಾಃ ।
ಉಪಾಸನರತಾಃ ಸರ್ವೇ ಘಟಯಂತಿ ವರಾನನೇ ॥
ತಮಹಂ ಭಾರಮಾಸಕ್ತಮನಾಧೃಷ್ಯಂ ದುರಾತ್ಮಭಿಃ ।
ಸುಖಂ ಸರ್ವಂ ಪರಿತ್ಯಜ್ಯ ರಾತ್ರ್ಯಹಾನಿ ಘಟಾಮಿ ವೈ ॥ – [233-54, 55]

49. ನಿತ್ಯಮಾರ್ಯಾಮಹಂ ಕುಂತೀಂ ವೀರಸೂಂ ಸತ್ಯವಾದಿನೀಮ್ ।
ಸ್ವಯಂ ಪರಿಚರಾಮ್ಯೇತಾಂ ಪಾನಾಚ್ಛಾದನಭೋಜನೈಃ ॥ – [233-40]

50. ನೈತಾಮತಿಶಯೇ ಜಾತು ವಸ್ತ್ರಭೂಷಣಭೋಜನೈಃ ।
ನಾಪಿ ಪರಿವದೇ ಚಾಹಂ ತಾಂ ಪೃಥಾಂ ಪೃಥಿವೀಸಮಾಮ್ ॥ – [233-41]

51. ನಾಪಿ ಶ್ವಶ್ರೂಂ ಪರಿವದೇ ಸರ್ವದಾ ಪರಿಯಂತ್ರಿತಾ । – [233-38.

ಅನ್ನವನ್ನು ತಲುಪಿಸಲಾಗತ್ತಿತ್ತು. ಆ ವೇದಜ್ಞಾನಿಗಳಾದ ಬ್ರಾಹ್ಮಣರೆಲ್ಲರನ್ನೂ ಬಲಿ, ವೈಶ್ವದೇವಾದಿಗಳು ನಡೆದ ಕೂಡಲೇ ಮೊತ್ತಮೊದಲು ಭೋಜನ, ವಸ್ತ್ರ, ಜಲ –ಇವುಗಳ ಮೂಲಕ ಅವರವರ ಯೋಗ್ಯತಾನುಸಾರವಾಗಿ ಪೂಜಿಸುವೆ.[52]

ಯುಧಿಷ್ಠಿರನಿಗೆ ಒಂದು ಲಕ್ಷ ಸಂಖ್ಯೆಯಲ್ಲಿ ದಾಸಿಯರಿರುವರು. ಅವರೆಲ್ಲರ ಹೆಸರು, ಆಕಾರ, ಭೋಜನ, ಬಟ್ಟೆಬರೆ, ಕರ್ತವ್ಯ –ಇವೆಲ್ಲವನ್ನೂ ನಾನು ತಿಳಿದಿರುವೆ.[53] ಅಂತಃಪುರದ ಎಲ್ಲ ಭೃತ್ಯರ ಕರ್ತವ್ಯವನ್ನೆಲ್ಲ ನಾನು ತಿಳಿದಿರುವೆನು.[54]

## ಇದೇ ಮಹತ್ವದ ಉಪಾಯ:

ಹೀಗೆ ನಿತ್ಯ ಜಾಗರೂಕಳಾಗಿದ್ದುಕೊಂಡು, ಏಕಾಗ್ರತೆಯಿಂದ, ಪತಿಗಳ ಶುಶ್ರೂಷೆ ನಡೆಸುವ ಮೂಲಕ ಅವರನ್ನು ಒಲಿಸಿಕೊಂಡಿರುವೆ.[55] ಪತಿಯನ್ನು ಒಲಿಸಿಕೊಳ್ಳಲು ಇದೇ ಉತ್ತಮ ಉಪಾಯ.[56]

---

52. ಅಷ್ಟಾವಗ್ರೇ ಬ್ರಾಹ್ಮಣಾನಾಂ ಸಹಸ್ರಾಣಿ ಸ್ಮ ನಿತ್ಯದಾ ।
ಭುಂಜತೇ ರುಕ್ಮಪಾತ್ರೀಷು ಯುಧಿಷ್ಠಿರನಿವೇಶನೇ ॥
ಅಷ್ಟಾಶೀತಿಸಹಸ್ರಾಣಿ ಸ್ನಾತಕಾ ಗೃಹಮೇಧಿನಃ ।
ತ್ರಿಂಶದ್ದಾಸೀಕ ಏಕೈಕೋ ಯಾನ್ ಬಿಭರ್ತಿ ಯುಧಿಷ್ಠಿರಃ ॥
ದಶಾನ್ಯಾನ್ಯಾನಿ ಸಹಸ್ರಾಣಿ ಯೇಷಾಮನ್ನಂ ಸುಸಂಸ್ಕೃತಂ ।
ಹ್ರಿಯತೇ ರುಕ್ಮಪಾತ್ರೀಭಿರ್ಯತೀನಾಮೂರ್ಧ್ವರೇತಸಾಮ್ ॥
ತಾನ್ ಸರ್ವಾನಗ್ರಹಾರೇಣ ಬ್ರಾಹ್ಮಣಾನ್ ವೇದವಾದಿನಃ ।
ಯಥಾರ್ಹಂ ಪೂಜಯಾಮಿ ಸ್ಮ ಪಾನಾಚ್ಛಾದನಭೋಜನೈಃ ॥
– 233-42, 43, 44, 45]

53. ಶತಂ ದಾಸೀಸಹಸ್ರಾಣಿ ಕೌಂತೇಯಸ್ಯ ಮಹಾತ್ಮನಃ ।....
....ತಾಸಾಂ ನಾಮ ಚ ರೂಪಂ ಚ ಭೋಜನಾಚ್ಛಾದನಾನಿ ಚ ।
ಸರ್ವಾಸಾಮೇವ ವೇದಾಹಂ ಕರ್ಮ ಚೈವ ಕೃತಾಕೃತಮ್ ॥ – [233-46, 48]

54. ಅಂತಃಪುರಾಣಾಂ ಸರ್ವೇಷಾಂ ಭೃತ್ಯಾನಾಂ ಚೈವ ಸರ್ವದಾ ।
ಆಗೋಪಾಲವಿಪಾಲೇಭ್ಯಃ ಸರ್ವಂ ವೇದ ಕೃತಾಕೃತಮ್ ॥ – [233-52]

55. ಅವಧಾನೇನ ಸುಭಗೇ ನಿತ್ಯೋತ್ಥಿತತಯೈವ ಚ ।
ಭರ್ತಾರೋ ವಶಗಾ ಮಹ್ಯಂ ಗುರುಶುಶ್ರೂಷಯೈವ ಚ ॥ – [233-39]

56. ಏತಜ್ಜಾನಾಮ್ಯಹಂ ಕರ್ತುಂ ಭರ್ತೃಸಂವನನಂ ಮಹತ್ । – [233-59]

ಇದಕ್ಕಿಂತ ವಿಪರೀತವಾಗಿ ಕೆಟ್ಟ ಸ್ತ್ರೀಯರಂತೆ ಮದ್ದು ಮಾಟಾದಿಗಳಿಂದ ಗಂಡನನ್ನು ಮುಷ್ಟಿಯಲ್ಲಿಟ್ಟುಕೊಳ್ಳುವುದನ್ನು ಮಾಡಲೇ ಬಾರದೆಂದು ದೃಢ ಪಡಿಸುವುದಕ್ಕಾಗಿ, ಉಪಸಂಹಾರದಲ್ಲಿ ಹೀಗೆ ಘೋಷಿಸಿರುವಳು–

'ಕೆಟ್ಟ ಸ್ತ್ರೀಯರ ಆಚಾರವನ್ನು ನಾನೆಂದೂ ಮಾಡುವುದೂ ಇಲ್ಲ; ಬಯಸುವುದೂ ಇಲ್ಲ.'[57]

## ಪತಿವ್ರತೆಯರಿಗೆ ದ್ರೌಪದಿಯ ಕಿವಿಮಾತು:

ತನ್ನ ಪಾತಿವ್ರತ್ಯದ ಕೆಲವು ಎಳೆಗಳನ್ನು ಬಿಡಿಸಿ ತೋರಿಸಿದ ದ್ರೌಪದಿ ಸತ್ಯಭಾಮೆಯನ್ನು ಪ್ರತಿನಿಧಿಸಿಕೊಂಡು (ಸತ್ಯಭಾಮೆಗೆ ಕೇಳಿಸಿಕೊಳ್ಳುವ ಆವಶ್ಯಕತೆ ಇಲ್ಲದಿದ್ದರೂ) ಉಳಿದ ಪತಿವ್ರತಾ ಸ್ತ್ರೀಯರಿಗಾಗಿ ಕೆಲವು ಕಿವಿಮಾತುಗಳನ್ನು ನೀಡುವಳು–

## ಪತಿಗಿಂತ ಮಿಗಿಲಾದ ದೈವವಿಲ್ಲ:

ಪತಿಯಂತಹ ದೇವತಾಪ್ರತಿಮೆ ಯಾವ ಲೋಕದಲ್ಲೂ ದೊರಕಲಾರನು. ಪತಿಯ ಅನುಗ್ರಹದಿಂದ ಎಲ್ಲಾ ಕಾಮನೆಗಳನ್ನೂ ಪಡೆಯಬಹುದು. ಅವನ ಅವಗ್ರಹಕ್ಕೆ ಪಾತ್ರವಾದಲ್ಲಿ ಎಲ್ಲ ಆಶೆಗಳೂ ಮಣ್ಣಗೂಡಬಲ್ಲವು.[58] ಪ್ರಸನ್ನನಾದ ಪತಿಯ ಮೂಲಕವೇ ಸ್ತ್ರೀಗೆ ಸಂತಾನ, ಬೇರೆ ಬೇರೆ ಭೋಗಗಳು, ಹಾಸಿಗೆ, ಆಸನ, ಸುಂದರ ವಸ್ತುಗಳ ದರ್ಶನ, ಉಡುಪು, ಆಭರಣ, ಮಾಲೆ, ಸ್ವರ್ಗಲೋಕ ಹಾಗೂ ವಿಪುಲವಾದ ಕೀರ್ತಿ –ಇವೆಲ್ಲ ಸಿದ್ಧಿಸುವವು.[59]

---

57. ಅಸತ್ಸ್ತ್ರೀಣಾಂ ಸಮಾಚಾರಂ ನಾಹಂ ಕುರ್ಯಾಂ ನ ಕಾಮಯೇ ।
– [233-59]

58. ನೈತಾದೃಶಂ ದೈವತಮಸ್ತಿ ಸತ್ಯೇ
ಸರ್ವೇಷು ಲೋಕೇಷು ಸದೇವಕೇಷು ।
ಯಥಾ ಪತಿಸ್ತಸ್ಯ ತು ಸರ್ವಕಾಮಾ
ಲಭ್ಯಾಃ ಪ್ರಸಾದಾತ್ ಕುಪಿತಶ್ಚ ಹನ್ಯಾತ್ ॥ – [234-2]

59. ತಸ್ಮಾದಪತ್ಯಂ ವಿವಿಧಾಶ್ಚ ಭೋಗಾಃ
ಶಯ್ಯಾಸನಾನ್ಯುತ್ತಮ ದರ್ಶನಾನಿ ।
ವಸ್ತ್ರಾಣಿ ಮಾಲ್ಯಾನಿ ತಥೈವ ಗಂಧಾಃ
ಸ್ವರ್ಗಶ್ಚ ಲೋಕೋ ವಿಪುಲಾ ಚ ಕೀರ್ತಿಃ ॥ – [234-3]

## ಇವಳಿಗೆ ನಾನು ಪ್ರಿಯ ಎನಿಸುವಂತಾಗಬೇಕು:

ಈ ಜಗತ್ತಿನಲ್ಲಿ ಎಂದೂ ಸುಖದಿಂದಲೇ ಸುಖವನ್ನು ಪಡೆಯಲು ಸಾಧ್ಯವಿಲ್ಲ. ಪತಿವ್ರತೆಯಾದವಳು ಪಾತಿವ್ರತ್ಯವನ್ನು ಅಳವಡಿಸಿಕೊಳ್ಳುವಾಗ ಸಂಭವಿಸುವ ದುಃಖವನ್ನು ಸಹಿಸಿಕೊಂಡು, ಅಂತಹ ದುಃಖದಿಂದಾಗಿ ಮುಂದೆ ಸುಖವನ್ನು ಪಡೆಯುವವಳಷ್ಟೇ. ನೀನು ಶ್ರೀಕೃಷ್ಣನನ್ನು ಸೌಹಾರ್ದದಿಂದ, ಪ್ರೀತಿಯಿಂದ, ಸೇವೆಯಿಂದ ನಿತ್ಯ ಆರಾಧಿಸು.[60] ಆಸನ, ಸುಂದರ ಮಾಲೆಗಳು, ದಾಕ್ಷಿಣ್ಯದ ಉಪಾಯ –ಇವುಗಳಿಂದೆಲ್ಲ 'ಇವಳಿಗೆ ನಾನು ಪ್ರಿಯ' ಎನಿಸುವಂತೆ ನಡೆದುಕೊಳ್ಳು. ಆಗ ಶ್ರೀಕೃಷ್ಣ ನಿನ್ನನ್ನು ಹಾರ್ದಿಕವಾಗಿ ಒಪ್ಪಿಕೊಳ್ಳುವನು.[61]

## ಮನೆಗೆ ಪ್ರವೇಶಿಸುವ ಸನ್ನಿವೇಶದಲ್ಲಿ:

ಹೊರಗಿನಿಂದ ಮನೆಯೊಳಗೆ ಪ್ರವೇಶಿಸುವ ಗಂಡನ ಸ್ವರ ಕೇಳಿದಾಕ್ಷಣ ಎದ್ದುನಿಂತು ಗೌರವಿಸು. ಒಳಗೆ ಪ್ರವೇಶಿಸಿದ ಪತಿಗೆ ಕೂಡಲೇ ಆಸನವನ್ನು ನೀಡಿ, ಪಾದ್ಯದ ಮೂಲಕ (ಪಾದವನ್ನು ನೀರಿನಿಂದ ತೊಳೆಯುವ ಉಪಚಾರ) ಉಪಚರಿಸು.[62]

---

60. ಸುಖಂ ಸುಖೇನೇಹ ನ ಜಾತು ಲಭ್ಯಂ
ದುಃಖೇನ ಸಾಧ್ವೀ ಲಭತೇ ಸುಖಾನಿ ।
ಸಾ ಕೃಷ್ಣಮಾರಾಧಯ ಸೌಹೃದೇನ
ಪ್ರೇಮ್ಣಾ ಚ ನಿತ್ಯಂ ಪ್ರತಿಕರ್ಮಣಾ ಚ ॥ – [234-4]

61. ತಥಾಽಸನೈಶ್ಚಾರುಭಿರುಗ್ರಮಾಲ್ಯೈಃ
ದಾಕ್ಷಿಣ್ಯಯೋಗೈರ್ವಿವಿಧೈಶ್ಚ ಗಂಧೈಃ ।
ಅಸ್ಯಾಃ ಪ್ರಿಯೋಽಸ್ಮೀತಿ ಯಥಾ ವಿದಿತ್ವಾ
ತ್ವಾಮೇವ ಸಂಶ್ಲಿಷ್ಯತಿ ತತ್ ವಿಧತ್ಸ್ವ ॥ – [234-5]

62. ಶ್ರುತ್ವಾ ಸ್ವರಂ ದ್ವಾರಗತಸ್ಯ ಭರ್ತುಃ
ಪ್ರತ್ಯುತ್ಥಿತಾ ತಿಷ್ಠ ಗೃಹಸ್ಯ ಮಧ್ಯೇ ।
ದೃಷ್ಟ್ವಾ ಪ್ರವಿಷ್ಟಂ ತ್ವರಿತಾಽಸನೇನ
ಪಾದ್ಯೇನ ಚೈನಂ ಪ್ರತಿಪೂಜಯಸ್ವ ॥ – [234-6]

## ನೀನೇ ಪತಿಕಾರ್ಯವನ್ನು ಮಾಡು:

ಶ್ರೀಕೃಷ್ಣ ಯಾವುದಾದರೂ ಕಾರ್ಯಕ್ಕಾಗಿ ಸೇವಕಿಯನ್ನು ನಿನ್ನಲ್ಲಿಗೆ ಕಳುಹಿಸಿಕೊಟ್ಟರೆ, ನೀನೇ ಕೂಡಲೇ ಎದ್ದು ಆ ಕಾರ್ಯವನ್ನು ಮಾಡು. ಇದರಿಂದ ಸಂಪೂರ್ಣ ಹೃದಯದಿಂದ ನೀನು ಅವನನ್ನು ಭಜಿಸುವಿ ಎಂದು ಅವನು ನಿನ್ನ ಅಂತರಂಗವನ್ನು ತಿಳಿದುಕೊಳ್ಳುವಂತಾಗುವುದು.[63]

## ರಹಸ್ಯವನ್ನು ರಕ್ಷಿಸು:

ಗಂಡ ನಿನ್ನಲ್ಲಿ ಏನನ್ನಾದರೂ ತಿಳಿಸಿದರೆ, ಅದು ಅಷ್ಟೊಂದು ಗೋಪ್ಯ ಅಲ್ಲದಿದ್ದರೂ, ಮತ್ತೊಬ್ಬರಲ್ಲಿ ಅದನ್ನು ತಿಳಿಸುವ ಚಾಪಲ್ಯಕ್ಕೆ ಒಳಗಾಗದೆ ಅದನ್ನು ರಹಸ್ಯವಾಗಿಯೇ ರಕ್ಷಿಸು. ಇದಕ್ಕೆ ವ್ಯತಿರಿಕ್ತವಾಗಿ ಆ ಸಂಗತಿಯನ್ನು ಮತ್ತೊಬ್ಬಳಲ್ಲಿ ನೀನು ತಿಳಿಸಿದಿಯಾದರೆ, ಅವಳ ಮೂಲಕ ಅದು ಕೃಷ್ಣನ ಕಿವಿಗೆ ಬಿದ್ದು, ಅದರಿಂದಾಗಿ ನಿನ್ನ ಚಾಪಲ್ಯ ಗೊತ್ತಾಗಿ ನಿನ್ನ ಬಗ್ಗೆ ಕೆಟ್ಟ ಭಾವನೆ ಮೂಡುವ ಅಪಾಯ ಇದೆ.[64]

## ಒಳ್ಳೆಯ ತಿಂಡಿತಿನಸುಗಳನ್ನು ತಿನ್ನಿಸು:

ಗಂಡನಿಗೆ ಪ್ರಿಯಗಳಾದ, ಹಿತಗಳಾದ ಭಕ್ಷ್ಯಭೋಜ್ಯಗಳನ್ನು ಗುರುತಿಸಿ, ಅವುಗಳನ್ನು ಬೇರೆ ಬೇರೆ ಉಪಾಯಗಳಿಂದ ತಿನ್ನಿಸು. ಅವನ ದ್ವೇಷಿಗಳು, ಅಹಿತರು, ಅವನ ಬಗ್ಗೆ ಉದಾಸೀನರಾಗಿರುವವರು ಹಾಗೂ ಕಪಟದ ವ್ಯವಹಾರವುಳ್ಳವರು –ಇಂತಹ ವ್ಯಕ್ತಿಗಳಿಂದ ಯಾವಾಗಲೂ ದೂರವಿರು.[65]

---

63. ಸಂಪ್ರೇಷಿತಾಯಾಮಥ ಚೈವ ದಾಸ್ಯಾಂ
ಉತ್ಥಾಯ ಸರ್ವಂ ಸ್ವಯಮೇವ ಕಾರ್ಯಮ್ ।
ಜಾನಾತು ಕೃಷ್ಣಸ್ತವ ಭಾವಮೇತಂ
ಸರ್ವಾತ್ಮನಾ ಮಾಂ ಭಜತೀತಿ ಸತ್ಯೇ ॥ – [244-7]

64. ತ್ವತ್‌ಸನ್ನಿಧೌ ಯತ್ ಕಥಯೇತ್ ಪತಿಸ್ತೇ
ಯದ್ಯಪ್ಯಗುಹ್ಯಂ ಪರಿರಕ್ಷಿತವ್ಯಮ್ ।
ಕಾಚಿತ್ ಸಪತ್ನೀ ತವ ವಾಸುದೇವಂ
ಪ್ರತ್ಯಾದಿಶೇತ್ ತೇನ ಭವೇದ್ ವಿರಾಗಃ ॥ – [244-8]

65. ಪ್ರಿಯಾಂಶ್ಚ ರಕ್ತಾಂಶ್ಚ ಹಿತಾಂಶ್ಚ ಭರ್ತುಃ
ತಾನ್ ಭೋಜಯೇಥಾ ವಿವಿಧೈರುಪಾಯೈಃ ।

## ಪರಪುರುಷರ ಎದುರು ಮೌನ:

ಪರಪುರುಷರ ಎದುರು ಗರ್ವವನ್ನಾಗಲೀ ತಿಳಿಗೇಡಿತನವನ್ನಾಗಲೀ ತೋರಿಸದೆ, ಮೌನದಿಂದಿದ್ದು ನಿನ್ನ ಮನೋಭಾವವನ್ನು ನಿಯಂತ್ರಿಸು. ಏಕಾಂತ ಪ್ರದೇಶದಲ್ಲಿ ಎಂದೂ ಪ್ರದ್ಯುಮ್ನ, ಸಾಂಬ ಮುಂತಾದ ನಿನ್ನ ಗಂಡುಮಕ್ಕಳ ಜೊತೆಗೂ ಕುಳಿತುಕೊಳ್ಳಬೇಡ.[66]

## ಸತ್‌ಸ್ತ್ರೀಯರ ಜೊತೆ ಸಖ್ಯ:

ಒಳ್ಳೆಯ ಕುಲದಲ್ಲಿ ಹುಟ್ಟಿ ಬಂದ, ಪಾಪಕರ್ಮಗಳಿಂದ ದೂರರಾಗಿರುವ, ಸಾಧ್ವಿಗಳ ಜೊತೆಗೆ ನಿನ್ನ ಸಖ್ಯ ಇರಲಿ. ಇದಕ್ಕೆ ಬದಲಾಗಿ ಕ್ರೂರಿಗಳಾದ, ಹೊಟ್ಟೆಬಾಕರಾದ, ಕ್ರೋಧಶೀಲರಾದ, ಕಳ್ಳತನ ನಡೆಸುವ, ದುಷ್ಟರಾದ, ಚಪಲ ರಾದ ಸ್ತ್ರೀಯರಿಂದ ಆದಷ್ಟು ದೂರ ಇರು.[67]

ಉತ್ತಮ ಮಟ್ಟದ ಮಾಲೆಗಳಿಂದ, ಆಭರಣಗಳಿಂದ, ಲೇಪನದ ದ್ರವ್ಯ ಗಳಿಂದ, ಸುಗಂಧದಿಂದ ಕೂಡಿದವಳಾಗಿ ಗಂಡನನ್ನು ಆರಾಧಿಸು.[68]

## ಸತ್ಯಭಾಮೆಯ ಅನುಗ್ರಹ:

ಗಂಡನನ್ನು ಒಲಿಸಿಕೊಳ್ಳುವ ವಿಷಯದಲ್ಲಿ ಸತ್ಯಭಾಮೆ ದ್ರೌಪದಿ ಎದುರು

---

ದ್ವೇಷ್ಯೈರುಪೇಕ್ಷ್ಯೈರಹಿತೈಶ್ಚ ತಸ್ಯ
ಭಿದ್ಯಸ್ವ ನಿತ್ಯಂ ಕುಹಕೋದ್ಯತೈಶ್ಚ ॥ – [244-9]

66. ಮದಂ ಪ್ರಮಾದಂ ಪುರುಷೇಷು ಹಿತ್ವಾ
ಸಂಯಚ್ಛ ಭಾವಂ ಪ್ರತಿಗೃಹ್ಯ ಮೌನಮ್ ।
ಪ್ರದ್ಯುಮ್ನಸಾಂಬಾವಪಿ ತೇ ಕುಮಾರೌ
ನೋಪಾಸಿತವ್ಯೌ ರಹಿತೇ ಕದಾಚಿತ್ ॥ – [244-10]

67. ಮಹಾಕುಲೀನಾಭಿರಪಾಪಿಕಾಭಿಃ
ಸ್ತ್ರೀಭಿಃ ಸತೀಭಿಸ್ತವ ಸಖ್ಯಮಸ್ತು ।
ಚಂಡಾಶ್ಚ ಶೌಂಡಾಶ್ಚ ಮಹಾಶನಾಶ್ಚ
ಚೌರಾಶ್ಚ ದುಷ್ಟಾಶ್ಚ ಚಲಾಶ್ಚ ವರ್ಜ್ಯಾಃ ॥ – [234-11]

68. ಮಹಾರ್ಹಮಾಲ್ಯಾಭರಣಾಂಗರಾಗಾ
ಭರ್ತಾರಮಾರಾಧಯ ಪುಣ್ಯಗಂಧಾ ॥ – [234-12]

ಪ್ರಸ್ತಾವಿಸುವಾಗ ಕುಹಕದ, ಅಪಹಾಸದ ಧ್ವನಿ ಇತ್ತು. ಆದರೆ ದ್ರೌಪದಿಯಿಂದ ಪಾತಿವ್ರತ್ಯದ ಬಗ್ಗೆ ವಿವರಣೆಯನ್ನು ಕೇಳಿದ ಮೇಲೆ ಅವಳ ಧಾರ್ಮಿಕತೆಗಾಗಿ ಸತ್ಕರಿಸಿ, ತನ್ನ ಕುಹಕದ ವಿಚಾರಣೆಗಾಗಿ ಕ್ಷಮಾಯಾಚನೆ ಮಾಡಿ 'ಅಭಿಪನ್ನಾಸ್ಮಿ' –ನಿನಗೆ ಶರಣಾಗತಳಾಗಿರುವೆನು –ಎಂದು ಒಪ್ಪಿಕೊಳ್ಳುವಷ್ಟೂ ಅವಳಿಂದ ಪ್ರಭಾವಿತಳಾಗಿರುವಳು. ಲಕ್ಷ್ಮೀದೇವಿಯ ಸಾಕ್ಷಾದವತಾರಳಾದ ಸತ್ಯಭಾಮೆ. ಹೀಗೆ ವಿಡಂಬಿಸುವ ಮೂಲಕ ಭಕ್ತೋತ್ತಮಳಾದ ದ್ರೌಪದಿಯ ಪಾತಿವ್ರತ್ಯವನ್ನು ಬೆಳಕಿಗೆ ತಂದು ದ್ರೌಪದಿಯನ್ನು ಅನುಗ್ರಹಿಸಿರುವಳು.

ಹೀಗೆ ಸತ್ಯಭಾಮೆಯ ಅನುಗ್ರಹವಿಶೇಷಕ್ಕೆ, ಅಭಿನಂದನವಿಶೇಷಕ್ಕೆ ಪಾತ್ರವಾದುದು ದ್ರೌಪದಿಯ ಪಾತಿವ್ರತ್ಯ ಎಂಬುದು ಅದರ ಉಲ್ಲೇಖಾರ್ಹ ಹೆಗ್ಗಳಿಕೆ.

## ಮೂಲಸ್ಫೂರ್ತಿ ಗ್ರಾಹ್ಯ:

ದ್ರೌಪದಿ ದ್ವಾಪರ ಯುಗಕ್ಕೆ ಸೇರಿದವಳು. ಕ್ಷತ್ರಿಯಸ್ತ್ರೀ. ಪಟ್ಟದ ರಾಣಿ. ಐದು ಗಂಡಂದಿರನ್ನು ಹೊಂದಿದ್ದವಳು. ಅಂತಹವಳು ಅಳವಡಿಸಿಕೊಂಡಿದ್ದ ಪಾತಿವ್ರತ್ಯ ಕಲಿಯುಗದ ಈಗಿನ ಮಹಿಳೆಯರಿಗೆ ಪೂರ್ಣವಾಗಿ ಪ್ರಸ್ತುತ ಆಗದಿರಬಹುದು. ಆದರೆ ಪಾತಿವ್ರತ್ಯದ ವಿಧಿನಿಷೇಧಗಳ ಮೂಲಸ್ಫೂರ್ತಿ ಎಂದೆಂದಿಗೂ ಎಲ್ಲೆಡೆಯೂ ಸಮಾನ. ಸಾವಿರ ಸಾವಿರ ಬ್ರಾಹ್ಮಣರನ್ನೂ ಯತಿಗಳನ್ನೂ ಸತ್ಕರಿಸುವ, ಪೂಜಿಸುವ ಅವಕಾಶ ಉಳಿದ ಮಹಿಳೆಯರ ಪಾಲಿಗೆ ಅಸಂಭಾವಿತವಾದರೂ ಒಬ್ಬಿಬ್ಬರು ಬ್ರಾಹ್ಮಣರನ್ನೋ ಯತಿಗಳನ್ನೋ ಸತ್ಕರಿಸಿ, ಪೂಜಿಸುವ ಅವಕಾಶವಾದರೂ ದೊರೆತಾಗ ದ್ರೌಪದಿಯ ಆ ನಿಟ್ಟಿನ ನಡತೆಯ ಸ್ಫೂರ್ತಿ ಪ್ರೇರಕವೆನಿಸದಿರದು ತಾನೇ? ಹೀಗೆಯೇ ಉಳಿದ ವಿಧಿ ನಿಷೇಧಗಳ ಬಗ್ಗೆಯೂ.

ಈ ದೃಷ್ಟಿಯಿಂದ ದ್ರೌಪದಿಯ ಪಾತಿವ್ರತ್ಯದ ಪದರುಗಳು ಪ್ರತಿಯೊಬ್ಬ ಮಹಿಳೆಯಿಂದಲೂ ಅಧ್ಯಯನಾರ್ಹ ಹಾಗೂ ಅನುಕರಣಾರ್ಹ.

* * *

ಪರಿಶಿಷ್ಟ

## ಪಾತಿವ್ರತ್ಯದ ಪ್ರಮುಖ ಅಂಗ :

# ಕೃಷ್ಣಮಂತ್ರಜಪ

ಸ್ತ್ರೀಯರಿಗೆ ಪಾತಿವ್ರತ್ಯದ ಅಂಗವಾಗಿ ವಿಧಿಸಲಾದ ಧಾರ್ಮಿಕ ಅನುಷ್ಠಾನಗಳ ಜೊತೆಗೆ ಮಹಾಭಾರತ, ರಾಮಾಯಣ, ಪುರಾಣ, ದಾಸಸಾಹಿತ್ಯ ಮುಂತಾದವುಗಳ ಶ್ರವಣ, ಮನನ, ನಿದಿಧ್ಯಾಸನರೂಪದ ಆಧ್ಯಾತ್ಮಿಕಸಾಧನೆಯೂ ವಿಹಿತವಾಗಿದೆ.

ಈ ಆಧ್ಯಾತ್ಮಿಕ ಸಾಧನೆಗೆ ಪ್ರತಿನಿಧಿಯಾಗಿ ಅವರು ಪ್ರತಿನಿತ್ಯ ಶ್ರೀಕೃಷ್ಣ ಮಂತ್ರದ ಜಪವನ್ನು ನಡೆಸಬೇಕು. ಈ ಮಂತ್ರದ ಜಪದಿಂದಾಗಿ ಅವರಿಗೆ ಆಧ್ಯಾತ್ಮಿಕಸಾಧನೆಗೆ ಸ್ಫೂರ್ತಿ ಉಂಟಾಗಬಲ್ಲದು. ಆಧ್ಯಾತ್ಮಿಕಸಾಧನೆಗೆ ತಾವೂ ಅಧಿಕಾರವುಳ್ಳವರೆಂಬ ಆತ್ಮವಿಶ್ವಾಸ ಮೂಡಬಲ್ಲದು.

ಸ್ತ್ರಿಯರು ಪುರುಷರಂತೆ ಮಂತ್ರಗಳನ್ನು ಜಪಿಸಬೇಕೆಂದು ವಿಶೇಷವಾದ ವಿಧಾನ ದೊರಕದೆ ಇರಬಹುದು. ವೃದ್ಧಹಾರೀತಸ್ಮೃತಿಯಲ್ಲಿ (11-87) 'ಜಪ್ತ್ವಾ ಮಂತ್ರಂ ಗುರುಂ ಪಶ್ಚಾದ್..........' ಎಂದು ಸ್ತ್ರೀಯರಿಗೆ ಗುರುಮಂತ್ರದ ಜಪವನ್ನು ವಿಧಿಸಿರುವುದುಂಟು. ಶ್ರೀ ವಾದಿರಾಜ ಶ್ರೀಪಾದರು ರಚಿಸಿರುವ 'ಮನೆವಾರ್ತೆ' ಹಾಡಲ್ಲಿ 'ಗುರುಗಳು ಕೊಟ್ಟಂಥ ಪರಮಮಂತ್ರವದ ಜಪಿಸಿ........' (೧೬ನೇ ಪದ್ಯ) ಎಂಬುದಾಗಿ ಗುರುಗಳಿಂದ ಮಂತ್ರೋಪದೇಶ ಪಡೆದು, ಮಂತ್ರವನ್ನು ಸ್ತ್ರೀಯರೂ ಜಪಿಸಬೇಕೆಂಬುದು ಸೂಚಿತವಾಗಿದೆ. ವಿವಾಹವು ಸ್ತ್ರೀಯರಿಗೆ ಉಪನಯನದ ಪ್ರತಿನಿಧಿಯಂತೆ ಇರುವುದೆಂದು ಶಾಸ್ತ್ರದಲ್ಲಿ ಹೇಳಲಾಗಿದೆ–

**ಸ್ತ್ರೀಣಾಂ ಪ್ರದಾನಕರ್ಮೈವ ಯಥೋಪನಯನಂ ತಥಾ ।**

ಆದ್ದರಿಂದ ವಿವಾಹವಾದ ಪ್ರತಿಯೊಬ್ಬ ಸ್ತ್ರೀಯರೂ ಕೃಷ್ಣಮಂತ್ರವನ್ನು ಜಪಿಸಬಹುದು. ಪುರುಷರು ಜಾತಾಶೌಚದ, ಮೃತಾಶೌಚದ ಸಂದರ್ಭಗಳಲ್ಲಿ ಅನಿವಾರ್ಯವಾಗಿ ಮಂತ್ರಗಳ ಜಪವನ್ನು ಬಿಟ್ಟುಬಿಡುವಂತೆ ಸ್ತ್ರೀಯರೂ ರಜಸ್ವಲೆಯರಾದಾಗ ಜಪ ಮಾಡದಿದ್ದರೂ ಅದು 'ಮಂತ್ರತ್ಯಾಗ' ಎಂಬ

ಅಪರಾಧ ಎನಿಸದು. ಶುದ್ಧರಾದ ಮೇಲೆ ಮಂತ್ರದ ಜಪವನ್ನು ಮುಂದುವರಿಸಲು ಬೇಕಾದ ಅರ್ಹತೆಯನ್ನು ಅವರು ಕಳೆದುಕೊಳ್ಳಲಾರರು.

ಕೃಷ್ಣಮಂತ್ರ ಜಪಿಸುವವನಿಗೆ ಹೆಚ್ಚಿನ ಶಕ್ತಿಸಾಮರ್ಥ್ಯವನ್ನು ನೀಡಬಲ್ಲ ಮಂತ್ರವೆಂದು ಶ್ರೀ ಮಧ್ವಾಚಾರ್ಯರು ಸಂದೇಶಿಸಿರುವರು.[69] ಶ್ರೀಕೃಷ್ಣ ಪರಮಾತ್ಮನು ಈ ಮಂತ್ರವನ್ನು ಜಪಿಸುವವರಿಗೆ ವಿಶೇಷವಾಗಿ ಫಲ ನೀಡಲೆಂದೇ ಒಂದು ರೂಪದಿಂದ ಭೂಮಿಯಲ್ಲಿಯೇ ನೆಲೆಸಿರುವನೆಂದ[70] ಮೇಲೆ ಅವನಿಗೆ ಈ ಮಂತ್ರದ ಜಪ ತುಂಬ ಪ್ರಿಯವಾದುದೆಂದು ಸಿದ್ಧಿಸುವುದು.

ಈ ದೃಷ್ಟಿಯಿಂದಲೂ ಸ್ತ್ರೀಯರು ಇದನ್ನು ಅವಶ್ಯವಾಗಿ ಜಪಿಸಬೇಕು. ಸ್ತ್ರೀಯರಿಗೆ ತಮ್ಮ ಪತಿಯೇ ಮುಖ್ಯ ಗುರು ಎನಿಸಿದ್ದು, ಅದರಿಂದಲೇ ಕೃಷ್ಣ ಮಂತ್ರದ ಉಪದೇಶವನ್ನು ಪಡೆದುಕೊಳ್ಳಬೇಕು. ಒಂದು ವೇಳೆ ಪತಿಗೆ ಕೃಷ್ಣ ಮಂತ್ರದ ಉಪದೇಶವಿಲ್ಲ ಎಂದರೆ ಬೇರ ಜ್ಞಾನಿಗಳ ಮೂಲಕ ಯತಿಗಳ ಮೂಲಕ ಮಂತ್ರೋಪದೇಶವನ್ನು ಪಡೆದುಕೊಳ್ಳಬೇಕು. ಪತಿಯಿಂದ ಉಪದೇಶವನ್ನು ಪಡಕೊಂಡವರೂ ತಮ್ಮ ಪಾಲಿಗೆ ಮಂತ್ರ ಹೆಚ್ಚು ಫಲಪ್ರದವಾಗಲೆಂದು ಪುನಃ ಯತಿಗಳ ಮೂಲಕ ಉಪದೇಶವನ್ನು ಪಡೆದುಕೊಳ್ಳಬಹುದು.

* * *

69. ವಾಸಿಷ್ಠ ವೃಷ್ಣಿಪ್ರವರಮಂತ್ರಾಸ್ತತ್ರಾಪಿ ವೀರ್ಯದಾಃ । – ತಂ. ಸಾ. ಸಂ. ೪-೪೨

70. ಗೋಪಾಲಮಂತ್ರಂ ಭಜತಾಂ ಫಲಪ್ರದಸ್ತ್ವೇಕೇನ ರೂಪೇಣ ಸ ಭುವ್ಯದೃಶ್ಯತ ।
– ಮ.ಭಾರ. ತಾ. ನಿ. ೩೨-೨೭

# ಸ್ತ್ರೀಜಪಪದ್ಧತಿ

## ಆಚಮನ:

| | |
|---|---|
| ಕೇಶವಾಯ ಸ್ವಾಹಾ ।<br>ನಾರಾಯಣಾಯ ಸ್ವಾಹಾ ।<br>ಮಾಧವಾಯ ಸ್ವಾಹಾ ॥ | [ಈ ಮೂರು ನಾಮಗಳನ್ನು ಪಠಿಸುತ್ತ ಉದ್ದಿನಕಾಳು ಮುಳುಗುವಷ್ಟೇ ಪ್ರಮಾಣದಲ್ಲಿ ಬಲಅಂಗೈಯನ್ನು ಗೋಕರ್ಣಾಕೃತಿಯನ್ನಾಗಿಸಿ ಅದರ ಬುಡದಿಂದ ಮೂರು ಬಾರಿ ನೀರನ್ನು ತೆಗೆದುಕೊಳ್ಳಬೇಕು.] |
| ಗೋವಿಂದಾಯ ನಮಃ ।<br>ವಿಷ್ಣವೇ ನಮಃ | [ಮೇಲಿನ ಮತ್ತು ಕೆಳಗಿನ ತುಟಿಗಳನ್ನು ಅಡ್ಡವಾಗಿ ತೊಳೆದುಕೊಳ್ಳಬೇಕು.] |
| ಮಧುಸೂದನಾಯ ನಮಃ । | [ಬಾಯಿಯನ್ನು ಕೆಳಗಿನಿಂದ ಮೇಲಕ್ಕೆ ತೊಳೆದುಕೊಳ್ಳಬೇಕು.] |
| ತ್ರಿವಿಕ್ರಮಾಯ ನಮಃ । | [ಪಾದಗಳ ಮೇಲ್ಭಾಗಕ್ಕೆ ನೀರನ್ನು ಸಿಂಪಡಿಸಬೇಕು.] |
| ವಾಮನಾಯ ನಮಃ । | [ಅಂಗುಷ್ಠ ಮತ್ತು ಉಂಗುರ ಬೆರಳುಗಳನ್ನು ಜೋಡಿಸಿ ಎರಡು ಕಣ್ಣುಗಳನ್ನು ಮುಟ್ಟಬೇಕು.] |
| ಶ್ರೀಧರಾಯ ನಮಃ । | [ಅಂಗುಷ್ಠ ಮತ್ತು ತೋರುಬೆರಳುಗಳಿಂದ ತೋಳನ್ನು ಮುಟ್ಟಬೇಕು.] |
| ಹೃಷೀಕೇಶಾಯ ನಮಃ । | [ಅಂಗುಷ್ಠ ಮತ್ತು ಕಿರುಬೆರಳುಗಳಿಂದ ಕಿವಿಗಳನ್ನು ಮುಟ್ಟಬೇಕು.] |
| ಪದ್ಮನಾಭಾಯ ನಮಃ । | [ಎಲ್ಲ ಬೆರಳುಗಳಿಂದ ಎಡಗೈಯನ್ನು ಮುಟ್ಟಬೇಕು.] |
| ದಾಮೋದರಾಯ ನಮಃ । | [ಮಧ್ಯ ಬೆರಳಿನಿಂದ ಮೂಲಾಧಾರವನ್ನು ಮುಟ್ಟಬೇಕು.] |
| ಪರಮಾತ್ಮನೇ ನಮಃ । | [ಎಲ್ಲ ಬೆರಳುಗಳಿಂದ ಹೃದಯವನ್ನು ಮುಟ್ಟಬೇಕು.] |

## ಸಂಕಲ್ಪ

ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣೋ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮ ಪಾದೇ ಜಂಬೂದ್ವೀಪೇ ಭಾರತವರ್ಷೇ ಭರತಖಂಡೇ ಮೇರೋರ್ದಕ್ಷಿಣಪಾರ್ಶ್ವೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣಕೂಲೇ ಶಾಲಿವಾಹನಶಕೇ ಬುದ್ಧಾವತಾರೇ ಅಸ್ಮಿನ್ ಪ್ರವರ್ತಮಾನೇ ......ಸಂವತ್ಸರೇ ......ಅಯನೇ .......ಋತೌ ........ಅರ್ಕೇ .............ಮಾಸೇ ..........ಪಕ್ಷೇ .......ಶುಭತಿಥೌ .......ವಾಸರಯುಕ್ತಾಯಾಂ, ಶುಭನಕ್ಷತ್ರ, ಶುಭಯೋಗ, ಶುಭಕರಣೈವಂಗುಣವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಅಸ್ಮತ್ ಪತ್ಯಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತವಾಸುದೇವಸಂಕರ್ಷಣ ಪ್ರದ್ಯುಮ್ನಾನಿರುದ್ಧ ಚತುರ್ಮೂರ್ತ್ಯಾದ್ಯನಂತಾವತಾರಾತ್ಮಕ ಶ್ರೀಕೃಷ್ಣಪ್ರೇರಣಯಾ ಶ್ರೀಕೃಷ್ಣಪ್ರೀತ್ಯರ್ಥಂ ಯಥಾಶಕ್ತಿ ಶ್ರೀಕೃಷ್ಣಷಡಕ್ಷರಜಪತರ್ಪಣಾಖ್ಯಂ ಕರ್ಮ ಕರಿಷ್ಯೇ । [ಉದ್ಧರಣೆಯಿಂದ ನೀರು ತೆಗೆದು ಅಂಗೈಗೆ ಹಾಕಿ ಬಿಡಬೇಕು.]

## ಪಾಪಪುರುಷನ ವಿಸರ್ಜನೆ

ಬ್ರಹ್ಮಹತ್ಯಾ ಶಿರಸ್ಕಂ ಚ ಸ್ವರ್ಣಸ್ತೇಯಭುಜದ್ವಯಮ್ ।
ಸುರಾಪಾನಹೃದಾಯುಕ್ತಂ ಗುರುತಲ್ಪಕಟಿದ್ವಯಮ್ ॥

ತತ್ಸಂಯೋಗಪದದ್ವಂದ್ವಮಂಗಪ್ರತ್ಯಂಗಪಾತಕಮ್ ।
ಉಪಪಾತಕರೋಮಾಣಂ ರಕ್ತಶ್ಮಶ್ರುವಿಲೋಚನಮ್ ॥
ಖಡ್ಗಚರ್ಮಧರಂ ಕೃಷ್ಣಂ ಕುಕ್ಷೌ ಪಾಪಂ ವಿಚಿಂತಯೇತ್ ॥

[ಹೊಟ್ಟೆಯ ಎಡಭಾಗವನ್ನು ಮುಟ್ಟಿಕೊಂಡು ಅಲ್ಲಿ ಪಾಪಪುರುಷನನ್ನು ಚಿಂತಿಸಬೇಕು.]

ಷಟ್ಕೋಣಮಂಡಲಮಧ್ಯಸ್ಥೋ ನೀಲವರ್ಣೋ ವಾಯ್ವಂತರ್ಗತಃ ಶ್ರೀ ಪ್ರದ್ಯುಮ್ನೋ ಭಗವಾನ್ ಮಚ್ಛರೀರಸ್ಥಂ ಪಾಪಪುರುಷಂ ವಾಯುನಾ ಶೋಷಯತು ॥

[ಹೊಕ್ಕುಳನ್ನು ಮುಟ್ಟಿಕೊಂಡು 'ಯಂ' ಎಂಬ ವಾಯುಬೀಜಮಂತ್ರವನ್ನು ಆರು ಬಾರಿ ಜಪಿಸಬೇಕು.]

ತ್ರಿಕೋಣಮಂಡಲಮಧ್ಯಸ್ಥೋ ರಕ್ತವರ್ಣೋ ವಹ್ನ್ಯಂತರ್ಗತಃ ಶ್ರೀಮದನಿ ರುದ್ಧೋ ಭಗವಾನ್ ಮಚ್ಛರೀರಸ್ಥಂ ಪಾಪಾಪುರುಷಂ ವಹ್ನಿನಾ ನಿರ್ದಹತು ॥

[ಎದೆಯನ್ನು ಮುಟ್ಟಿಕೊಂಡು 'ರಂ' ಎಂಬ ಅಗ್ನಿಬೀಜಮಂತ್ರವನ್ನು ಹನ್ನೆರಡು ಬಾರಿ ಜಪಿಸಬೇಕು.]

**ವರ್ತುಲವಮಂಡಲಮಧ್ಯಸ್ಥಃ ಶ್ವೇತವರ್ಣೋ ವರುಣಾಂತರ್ಗತಶ್ರೀವಾಸುದೇವೋ ಭಗವಾನ್ ಮಚ್ಛರೀರಮಮೃತವೃಷ್ಟ್ಯಾಽಽಪ್ಲಾವಯತು ॥**

[ನೆತ್ತಿಯನ್ನು ಮುಟ್ಟಿಕೊಂಡು 'ವಂ' ಎಂಬ ಬೀಜಮಂತ್ರವನ್ನು ಇಪ್ಪತ್ತ ನಾಲ್ಕು ಬಾರಿ ಜಪಿಸಬೇಕು.]

## ಪ್ರಾಣಾಯಾಮ

**'ಶ್ರೀಂ ಕ್ಲೀಂ ಕೃಷ್ಣಾಯ ನಮಃ ಶ್ರೀಂ'**

[ಮೂಗಿನ ಬಲಭಾಗದ ರಂಧ್ರದಿಂದ ದೇಹದೊಳಗಿದ್ದ ಗಾಳಿಯನ್ನೆಲ್ಲ ಹೊರಗೆ ಹಾಕುವುದರ ಮೂಲಕ 'ರೇಚಕ'ವನ್ನು ನಡೆಸಬೇಕು. ಎಡಭಾಗದ ರಂಧ್ರದ ಮೂಲಕ ಗಾಳಿಯನ್ನು ಸ್ವೀಕರಿಸಿ 'ಪೂರಕ'ವನ್ನು ನಡೆಸಬೇಕು. ಹೀಗೆ ಪೂರಕದ ಮೂಲಕ ಸ್ವೀಕರಿಸಿದ ಗಾಳಿಯನ್ನು ಮೂಗಿನ ಎರಡೂ ರಂಧ್ರಗಳನ್ನು ಗಟ್ಟಿಯಾಗಿ ಮುಚ್ಚಿಕೊಳ್ಳುವ ಮೂಲಕ 'ಕುಂಭಕ'ವನ್ನು ನಡೆಸಬೇಕು. ಈ ಕುಂಭಕದ ಸ್ಥಿತಿಯಲ್ಲಿ 'ಶ್ರೀಂ ಕ್ಲೀಂ ಕೃಷ್ಣಾಯ ನಮಃ ಶ್ರೀಂ' ಎಂಬ ಮೂಲಮಂತ್ರವನ್ನು ಎಂಟು ಬಾರಿ ಜಪಿಸಬೇಕು.]

## ಋಷ್ಯಾದಿಗಳ ಸ್ಮರಣೆ

**ಅಸ್ಯ ಶ್ರೀಕೃಷ್ಣಷಡಕ್ಷರಮಂತ್ರಸ್ಯ ಬ್ರಹ್ಮಾ ಋಷಿಃ** [ತಲೆಯನ್ನು ಮುಟ್ಟಿಕೊಳ್ಳಬೇಕು.] **ದೈವೀ ಗಾಯತ್ರೀ ಛಂದಃ** [ವಾಗಿಂದ್ರಿಯದ ಆಧಾರವಾದ ಬಾಯಿಯನ್ನು ಮುಟ್ಟಿಕೊಳ್ಳಬೇಕು.] **ಶ್ರೀಕೃಷ್ಣೋ ದೇವತಾ ।** [ಎದೆಯನ್ನು ಮುಟ್ಟಿಕೊಳ್ಳಬೇಕು.

## ಷಡಂಗನ್ಯಾಸ

**ಪೂರ್ಣಜ್ಞಾನಾತ್ಮನೇ ಹೃದಯಾಯ ನಮಃ ।** – [ಹೃದಯವನ್ನು ಬಲಗೈಯಿಂದ ಮುಟ್ಟಿಕೊಳ್ಳಬೇಕು.]

**ಪೂರ್ಣೈಶ್ವರ್ಯಾತ್ಮನೇ ಶಿರಸೇ ಸ್ವಾಹಾ ।** – [ತಲೆಯನ್ನು ಮುಟ್ಟಿಕೊಳ್ಳಬೇಕು.]

**ಪೂರ್ಣಪ್ರಭಾತ್ಮನೇ ಶಿಖಾಯೈ ವಷಟ್ ।** – [ಜುಟ್ಟನ್ನು ಮುಟ್ಟಿಕೊಂಡು ಹೇಳಬೇಕು.]

ಪೂರ್ಣಾನಂದಾತ್ಮನೇ ಕವಚಾಯ ಹುಮ್ । – [ಎದೆಯ ಮೇಲೆ ಸ್ವಸ್ತಿಕಾಕಾರದಲ್ಲಿ ಕೈಗಳನ್ನು ಹಿಡಿದುಕೊಳ್ಳಬೇಕು.]

ಪೂರ್ಣತೇಜ ಆತ್ಮನೇ ನೇತ್ರಾಭ್ಯಾಂ ವೌಷಟ್ । – [ಕಣ್ಣುಗಳನ್ನು ಮುಟ್ಟಿಕೊಳ್ಳಬೇಕು.]

ಪೂರ್ಣಶಕ್ತ್ಯಾತ್ಮನೇ ಅಸ್ತ್ರಾಯ ಫಟ್ । – [ಮೂರು ಚಪ್ಪಾಳೆ ತಟ್ಟುವುದರ ಮೂಲಕ ದಿಗ್ಬಂಧ ಮಾಡಿಕೊಳ್ಳಬೇಕು.]

## ಧ್ಯಾನ

ಧ್ಯಾಯೇದ್ಧರಿನ್ಮಣಿನಿಭಂ ಜಗದೇಕವಂದ್ಯಂ
ಸೌಂದರ್ಯಸಾರಮರಿಶಂಖವರಾಭಯಾನಿ ।
ದೋರ್ಭಿರ್ದಧಾನಮಜಿತಂ ಸರಸಂ ಚ ಭೈಷ್ಮೀ-
ಸತ್ಯಾಸಮೇತಮಖಿಲಪ್ರದಮಿಂದಿರೇಶಮ್ ॥[71]

ಅಸ್ಮತ್ ಪತ್ಯಂತರ್ಗತ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಗೋಪಾಲಕೃಷ್ಣ ಪ್ರೇರಣಯಾ ಶ್ರೀಗೋಪಾಲಕೃಷ್ಣಪ್ರೀತ್ಯರ್ಥಂ ಯಥಾಶಕ್ತಿ ಶ್ರೀಕೃಷ್ಣಷಡಕ್ಷರಮಂತ್ರಜಪತರ್ಪಣಮಹಂ ಕರಿಷ್ಯೇ ॥ [ಎಂದು ಉದ್ಧರಣೆಯಿಂದ ಅಂಗೈ ಮೇಲೆ ನೀರು ಬಿಡುವುದರ ಮೂಲಕ ಸಂಕಲ್ಪಿಸಬೇಕು.]

ಶ್ರೀಂ ಕ್ಲೀಂ ಕೃಷ್ಣಾಯ ನಮಃ ಶ್ರೀಂ ಈ ಮೂಲಮಂತ್ರವನ್ನು ಜಪಿಸಬೇಕು. ಜಪವನ್ನು ಬಲಗೈಯ ಅನಾಮಿಕ ಬೆರಳಿನ ಮಧ್ಯಗ್ರಂಥಿಯಿಂದ ಆರಂಭಿಸಿ ತೋರುಬೆರಳ ಬುಡದ ಗ್ರಂಥಿಯವರೆಗೆ ನಡುಬೆರಳಿನ ಬುಡದ ಮತ್ತು ಮಧ್ಯ ಗ್ರಂಥಿಗಳಿಗೆ ಪ್ರದಕ್ಷಿಣಾಕಾರವಾಗಿ ಹತ್ತು ಗ್ರಂಥಿಗಳಲ್ಲಿ ಹತ್ತು ಸಂಖ್ಯೆಯನ್ನು ಎಣಿಸಬೇಕು.

ಶ್ರೀಂ ಕ್ಲೀಂ ಕೃಷ್ಣಾಯ ನಮಃ । ಶ್ರೀಂ ಕೃಷ್ಣಂ ತರ್ಪಯಾಮಿ ॥

[ಎಂಬುದಾಗಿ ಹತ್ತು ಮಂತ್ರಜಪಕ್ಕೆ ಒಂದರಂತೆ ತರ್ಪಣ ನೀಡಬೇಕು.]

---

71. ಎಲ್ಲರಿಂದ ಮುಖ್ಯವಾಗಿ ಸ್ತುತ್ಯನಾದ, ಸೌಂದರ್ಯಪರಿಪೂರ್ಣನಾದ, ನಾಲ್ಕು ಕೈಗಳಲ್ಲಿ ಚಕ್ರಶಂಖಗಳನ್ನೂ ವರ, ಅಭಯಮುದ್ರೆಗಳನ್ನೂ ಧರಿಸಿರುವ, ಭಕ್ತರ ಮೇಲೆ ಕರುಣಾರಸವನ್ನು ಬೀರುತ್ತಿರುವ, ಸಕಲ ಪುರುಷಾರ್ಥಗಳನ್ನು ನೀಡುವ, ರುಕ್ಮಿಣೀಸತ್ಯಭಾಮೆಯರೊಡನೆ ಕೂಡಿರುವ, ನೀಲಮಣಿಯಂತೆ ನೀಲವರ್ಣದ ಸರ್ವೋತ್ತಮನಾದ ಇಂದಿರಾಪತಿಯನ್ನು ಧ್ಯಾನಿಸಬೇಕು.

## ಉಪಸಂಹಾರ

[ಧ್ಯಾನ, ಅಂಗನ್ಯಾಸ, ಋಷಿಛಂದಸ್ಸು ದೇವತೆಗಳ ಉಲ್ಲೇಖ ಹಾಗೂ ಪ್ರಾಣಾಯಾಮ –ಇವುಗಳನ್ನು ನಡೆಸಬೇಕು.]

## ಕೃಷ್ಣಾರ್ಪಣ

ಅನೇನ ಶ್ರೀಕೃಷ್ಣಷಡಕ್ಷರಮಂತ್ರಜಪತರ್ಪಣಕರಣೇನ ಪತ್ಯಂತರ್ಗತಃ ಶ್ರೀಮುಖ್ಯ ಪ್ರಾಣಾಂತರ್ಗತಃ ಗೋಪಾಲಕೃಷ್ಣಃ ಪ್ರೀಯತಾಮ್ । ಶ್ರೀಕೃಷ್ಣಾರ್ಪಣಮಸ್ತು ॥

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋಜಪಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥70

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ತೇ ॥71

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾಽನುಸೃತಃ ಸ್ವಭಾವಮ್ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

ಅನೇನ [ತಿಥ್ಯಾದಿಗಳನ್ನು ಉಲ್ಲೇಖಿಸಿ] ಪ್ರಾತಃಕಾಲೇ ಜಪತರ್ಪಣಕರಣೇನ ಪತ್ಯಂತರ್ಗತಃ ಶ್ರೀಮುಖ್ಯಪ್ರಾಣಾಂತರ್ಗತಃ ಶ್ರೀಗೋಪಾಲಕೃಷ್ಣಃ ಪ್ರೀಯತಾಮ್ ॥ [ಆಚಮನ ಮಾಡಬೇಕು.] ಜಪಕಾಲೇ ಮಧ್ಯೇ ಮಂತ್ರತಂತ್ರಸ್ವರವರ್ಣಲೋಪ ದೋಷಪ್ರಾಯಶ್ಚಿತ್ತಾರ್ಥಂ ನಾಮತ್ರಯಜಪಂ ಕರಿಷ್ಯೇ । [ಎಂದು ಸಂಕಲ್ಪಿಸಿ] ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ ॥ [ಎಂದು ಸಾಧ್ಯವಾದಷ್ಟು ಬಾರಿ ಪಠಿಸಬೇಕು.]

* * *

---

72. ಯಾರ ಸ್ಮರಣೆಯಿಂದ, ನಾಮೋಚ್ಚಾರಣೆಯಿಂದ ತಪಸ್ಸು, ಜಪ ಮುಂತಾದ ಕ್ರಿಯೆಗಳಲ್ಲಿಯ ನ್ಯೂನತೆ ತೊಲಗಿ ಪರಿಪೂರ್ಣತೆಯು ಸಿದ್ಧಿಸುವುದೋ ಅಂತಹ ಅಚ್ಯುತನನ್ನು ಸ್ತುತಿಸುವೆನು, ನಮಿಸುವೆನು.

73. ಹೇ ಜನಾರ್ದನ! ಹೇ ದೇವ! ಮಂತ್ರದಿಂದ ಹೀನವಾದ, ಕ್ರಿಯೆಯಿಂದ ಹೀನ ವಾದ, ಭಕ್ತಿಯಿಂದ ಹೀನವಾದ ನನ್ನ ಕರ್ಮ ಪೂರ್ಣವೆನಿಸಿ ನಿನಗೆ ಸಮರ್ಪಿತವಾಗಲಿ.

## ಲಕ್ಷ್ಮೀದೇವಿಯ ಸನ್ನಿಧಾನ
## ಯಾರಲ್ಲಿದೆ? ಯಾರಲ್ಲಿಲ್ಲ?

**ಸತ್ಯಾಸು ನಿತ್ಯಂ ಪ್ರಿಯದರ್ಶನಾಸು**
**ಸೌಭಾಗ್ಯಯುಕ್ತಾಸು ಗುಣಾನ್ವಿತಾಸು।**
**ವಸಾಮಿ ನಾರೀಷು ಪತಿವ್ರತಾಸು**
**ಕಲ್ಯಾಣಶೀಲಾಸು ವಿಭೂಷಿತಾಸು॥**

ಮ.ಭಾರ.ಅನುಶಾಸನ 11–13

ಸತ್ಯನಿಷ್ಠರಾದ, ಯಾವಾಗಲೂ ಪ್ರಿಯನೋಟವುಳ್ಳ, ಸೌಭಾಗ್ಯಸಂಪನ್ನರಾದ, ಗುಣಯುಕ್ತರಾದ, ಪತಿವ್ರತೆಯರಾದ, ಕಲ್ಯಾಣಶೀಲರಾದ, ಯಾವಾಗಲೂ ಅಲಂಕೃತರಾಗಿರುವ ನಾರಿಯರಲ್ಲಿ ನಾನು ನೆಲೆಸಿರುವೆನು.

**ಪ್ರಕೀರ್ಣಭಾಂಡಾಮನವೇಕ್ಷ್ಯಕಾರಿಣೀಂ**
**ಸದಾ ಚ ಭರ್ತುಃ ಪ್ರತಿಕೂಲವಾದಿನೀಮ್।**
**ಪರಸ್ಯ ವೇಶ್ಮಾಭಿರತಾಮಲಜ್ಜಾಂ**
**ಏವಂವಿಧಾಂ ತಾಂ ಪರಿವರ್ಜಯಾಮಿ॥**

ಮ.ಭಾರ.ಅನುಶಾಸನ 11–11

ಮನೆಯ ಪಾತ್ರೆಪಗಡೆಗಳನ್ನು ಚೆಲ್ಲಾಪಿಲ್ಲಿಯಾಗಿ ಹರಡಿರುವ, ಸರಿಯಾಗಿ ಪರಿಶೀಲಿಸದೆಯೇ ಕಾರ್ಯಗಳನ್ನು ಮಾಡುವ, ಯಾವಾಗಲೂ ಗಂಡನಿಗೆ ವಿರುದ್ಧವಾಗಿಯೇ ಮಾತನಾಡುವ, ಇನ್ನೊಬ್ಬರ ಮನೆಯ ವ್ಯವಹಾರದಲ್ಲಿ ಆಸಕ್ತಳಾಗಿರುವ, ನಾಚಿಗೆಗೆಟ್ಟವಳಾದ ನಾರಿಯನ್ನು ನಾನು ದೂರಮಾಡುವೆನು.

ಮಹಾಭಾರತದಲ್ಲಿ [ಅನುಶಾಸನ ಪರ್ವ [11–13,11] ನಿರೂಪಿತವಾಗಿರುವಂತೆ ಲಕ್ಷ್ಮೀದೇವಿ ತನ್ನದ್ದೇ ಮತ್ತೊಂದು ರೂಪ ಆದ ರುಗ್ಮಿಣಿಯ ಎದುರು ಶ್ರೀಕೃಷ್ಣನ ಸಮಕ್ಷಮದಲ್ಲಿ ಹೇಳಿರುವ ಮಾತುಗಳಿವು. ತಾವು ಲಕ್ಷ್ಮಿಯ ಸನ್ನಿಧಾನ ವಿಶೇಷಕ್ಕೆ ಪಾತ್ರರಾಗಬೇಕೆಂದು ಬಯಸುವ ಪತಿವ್ರತೆಯರಿಂದ ಮನನೀಯವಾದವುಗಳು.



## "ಸ್ತ್ರೀಧರ್ಮಗಳ ಬಗ್ಗೆಯೇ ಹರಟೆ ಹೊಡೆಯಬೇಕು"

"ಸ್ತ್ರೀಯರು ಒಟ್ಟಾದಾಗ ಏನೇನೋ ಹರಟೆ ಹೊಡೆಯುವುದು ಸಾಮಾನ್ಯ. ಲೌಕಿಕ ವಿಷಯಗಳ ಬಗ್ಗೆ ಹರಟೆ ಹೊಡೆದು ಆಯುಷ್ಯವನ್ನು ವ್ಯರ್ಥ ಮಾಡಿಕೊಳ್ಳುವ ಬದಲು ದ್ರೌಪದೀ-ಸತ್ಯಭಾಮೆಯರಂತೆ ಸ್ತ್ರೀಧರ್ಮಗಳ ಬಗ್ಗೆಯೇ ಹರಟೆ ಹೊಡೆಯಬೇಕು."

ದ್ವೈತವನದಲ್ಲಿ ದ್ರೌಪದೀಸತ್ಯಭಾಮೆ ಒಟ್ಟಾದಾಗ ನಡೆಸಿದ ಸ್ತ್ರೀಧರ್ಮದ ಬಗೆಗಿನ ವಿಚಾರ ವಿನಿಮಯವನ್ನು ತಾತ್ಪರ್ಯಪೂರ್ವಕವಾಗಿ ಪ್ರತಿಪಾದಿಸಿರುವ ಮಹಾಭಾರತದಿಂದ ಸ್ತ್ರೀಯರಿಗೆ ಸೂಚಿತವಾದ ಸಂದೇಶವಿದು.

ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರು

Gopya, Udupi / 2528585